# ಶ್ರೀ ವಿದ್ಯಾರಣ್ಯ ವಿಜಯ

ಅಥವಾ

# ವಿಜಯನಗರ ರಾಜ್ಯ ಸ್ಥಾಪನೆ

ಮತ್ತು

## ಶ್ರೀ ವಿದ್ಯಾರಣ್ಯ ಸ್ತುತಿ

**ಡಿ. ವಿ. ಗುಂಡಪ್ಪನವರಿಂದ**

ಮೂರನೆಯ ಆವೃತ್ತಿ

ಬೆಂಗಳೂರು ಸಿಟಿ

ಕರ್ಣಾಟಕ ಪ್ರಕಟನಾಲಯ

ವಿಭವ ಸಂ॥ ಕ್ರಿ. ಶ. ೧೯೨೮

## ಈ ಲೇಖಕರ ಇತರ ಗ್ರಂಥಗಳು

**ಕವಿತೆ—**

ನಿವೇದನ

ವಸಂತ ಕುಸುಮಾಂಜಲಿ

**ನಾಟಕ—**

ತಿಲೋತ್ತಮೆ

ಕನಕಾಲುಕಾ

**ಜೀವನ ಚರಿತ್ರೆ—**

ಗೋಖಲೆ

ದಿವಾನ್ ರಂಗಾಚಾರ್ಲು

ವಿದ್ಯಾರಣ್ಯರು ಮತ್ತು ಅವರ ಕಾಲ

—ಮೊದಲಾದುವು

# ವಿಜ್ಞಾಪನೆ

ಶ್ರೀ ವಿದ್ಯಾರಣ್ಯ ಚರಿತ್ರೆಯು ಇತರ ಐತಿಹಾಸಿಕ ವಸ್ತುಗಳಂತೆಯೇ—ಎಂದರೆ ದೇಶ ಚರಿತ್ರೆಯ ಇತರ ಪ್ರಕರಣಗಳಂತೆಯೇ—ಗದ್ಯೋಪನ್ಯಾಸಕ್ಕೆ ತಕ್ಕ ವಿಷಯವೆಂದು ಆಪಾತತಃ ನೋಡಿದರೆ ತೋರುತ್ತದೆ. ಆ ಚರಿತ್ರೆಯನ್ನು ಅದೇ ರೂಪದಲ್ಲಿ ಕೂಡಿದಷ್ಟು ವಿಸ್ತಾರವಾಗಿ ಬೇರೊಂದು ಪುಸ್ತಕದಲ್ಲಿ ಬರೆದಿರುವುದಾಗಿದೆ. ಆದರೂ ಅದನ್ನೇ ಇಲ್ಲಿ ದೃಶ್ಯಕಾವ್ಯದ ರೀತಿಯಲ್ಲಿ ಚಿತ್ರಿಸಿರುವುದಕ್ಕೆ ಕೆಲವು ವಿಶೇಷ ಕಾರಣಗಳುಂಟು. ಅವುಗಳನ್ನಿಲ್ಲಿ ಸಂಗ್ರಹವಾಗಿ ಅರಿಕೆಮಾಡುವುದು ಲೇಖಕನ ಕರ್ತವ್ಯವೆಂದು ತೋರುತ್ತದೆ.

ಮಾನವ ಪ್ರಪಂಚದಲ್ಲಿಯ ಯಾವ ವಸ್ತುವಿನ ಅಥವಾ ವ್ಯಾಪಾರದ ಸ್ವರೂಪವನ್ನು ಚೆನ್ನಾಗಿ ತಿಳಿಯಬೇಕಾದರೂ ಅದನ್ನು ಎರಡು ಕಡೆಗಳಿಂದ ನೋಡಬೇಕು: (೧) ಹೊರಗಿನಿಂದ, (೨) ಒಳಗಿನಿಂದ. ಉದಾಹರಣೆಗಾಗಿ, ಒಂದು ಮನೆಯ ಸ್ವರೂಪವನ್ನು ನಾವು ತಿಳಿದುಕೊಳ್ಳಬೇಕೆಂದರೆ ಮೊದಲು ಅದರ ನಾಲ್ಕು ಪಕ್ಕದ ಬೀದಿಗಳಲ್ಲಿಯೂ ನಿಂತು ಅದರ ಅಂದ ಚೆಂದಗಳನ್ನು ನೋಡುತ್ತೇವೆ; ನೆರೆಹೊರೆಯ ಸನ್ನಿವೇಶಗಳನ್ನು ಪರೀಕ್ಷಿಸುತ್ತೇವೆ; ಅದು ಎತ್ತರವೆ, ತಗ್ಗೆ ಎಂಬುದನ್ನೂ ಅದಕ್ಕೆ ಗಾಳಿ ಮಳೆಗಳ ಹೊಡೆತವು ಹೇಗಿದೆ ಎಂಬುದನ್ನೂ ವಿಚಾರಿಸಿಕೊಳ್ಳುತ್ತೇವೆ. ಹೀಗೆ ಹೊರಗಿನ ವಿಚಾರಣೆಗಳೆಲ್ಲವೂ ಆದಮೇಲೆ ಒಳಕ್ಕೆ ಹೋಗಿ ಅದರ ಮುಖ್ಯ ಸ್ಥಳಗಳಲ್ಲಿ ನಿಂತು ಅಲ್ಲಿಯ ಕಿಟಕಿ ಬಾಗಲುಗಳಿಂದ ಹೊರಗಿನ ನಾಲ್ಕು ಕಡೆಯ ಮನೆ ಬೀದಿಗಳೂ ತೋಟ ಬಯಲುಗಳೂ ಹೇಗೆ ಕಾಣುತ್ತವೆಂದು ನೋಡುತ್ತೇವೆ; ಅದರ ಸ್ಥಳವಿಭಾಗದ ರೀತಿಯನ್ನು ಪರೀಕ್ಷಿಸುತ್ತೇವೆ; ಅದರ ಕವಾಟ ಗವಾಕ್ಷಿಗಳ ಏರ್ಪಾಟನ್ನು ನೋಡುತ್ತೇವೆ; ಅದರ ಕಟ್ಟಡದಲ್ಲಿ ಉಪಯೋಗಿಸಿರುವ ಮರಮುಟ್ಟುಗಳ ಯೋಗ್ಯತೆಯನ್ನೂ ಅದಕ್ಕಿರುವ ಜಲಾನುಕೂಲವನ್ನೂ ವಿಚಾರಿಸಿಕೊಳ್ಳುತ್ತೇವೆ. ಹೀಗೆ ಬಹಿರಂಗ ಅಂತರಂಗಗಳೆರಡರ ಪರಾಮರ್ಶವನ್ನೂ ಮಾಡಿದ ಹೊರತು ಆ ಮನೆಯ ನಿಜ

ವಾದ ಬೆಲೆಯು ನಮಗೆ ಹೆಚ್ಚು ಕಡಿಮೆಗಳಿಲ್ಲದಂತೆ ತಿಳಿಯಬರುವುದಿಲ್ಲ. ಮಾನುಷ ವ್ಯಾಪಾರಗಳ ಸ್ವರೂಪವೂ ಅಷ್ಟೇ.

ಐತಿಹಾಸಿಕ ಸಂದರ್ಭಗಳ ಬಾಹ್ಯರೂಪವನ್ನು ಗದ್ಯೋಪನ್ಯಾಸ ರೂಪದ ಚರಿತ್ರೆಯು ನಿಷ್ಕೃಷ್ಟವಾದ ರೀತಿಯಲ್ಲಿ ವಿವರಿಸಬಲ್ಲುದು. ಆದರೆ ಅವುಗಳ ಅಂತಸ್ತತ್ತ್ವವನ್ನು ಅಂತಹ ಉಪನ್ಯಾಸವೊಂದರಿಂದಲೇ ಪೂರ್ತಿಯಾಗಿ ಸ್ಪಷ್ಟಗೊಳಿಸಲು ಆಗಲಾರದು. ಏಕೆಂದರೆ ಬಾಹ್ಯ ಲಕ್ಷಣಗಳು ಸ್ಥೂಲವಾದುವು. ಅವು ಲೆಕ್ಕಕ್ಕೂ ತೂಕಕ್ಕೂ ಅಳತೆಗೂ ಸಿಕ್ಕುತ್ತವೆ. ಆದುದರಿಂದ ಅವುಗಳನ್ನು ಗೊತ್ತಾದ ಮಾತುಗಳಿಂದ ತಿಳಿಯಪಡಿಸಲು ಆಗುವುದು. ಇಷ್ಟು ಮಂದಿ ಸೈನಿಕರು ಯುದ್ಧಮಾಡಿದರು, ಇಂತಹ ರಾಜನು ಗೆದ್ದನು, ಇಂತಹವನು ಸೋತನು, ಇಷ್ಟು ಹಣ ಕೊಳ್ಳೆಯಾಯಿತು—ಎಂಬೀತೆರದ ವಿವರಗಳು ಐತಿಹಾಸಿಕ ಸಂಗತಿಗಳ ಸ್ಥೂಲಾಂಶಗಳು. ಇವುಗಳನ್ನು ನಿರ್ಧರಿಸಲು ಆ ಕಾಲದ ಶಾಸನಗಳೂ ಗ್ರಂಥಗಳೂ ಆಧಾರಗಳಾಗಿರುತ್ತವೆ. ಆ ಆಧಾರಗಳಿಂದ ಆ ಸ್ಥೂಲಾಂಶಗಳನ್ನು ನ್ಯೂನಾತಿರೇಕಗಳಿಲ್ಲದಂತೆ ನಿರ್ಧರಿಸಿ ಉಲ್ಲೇಖಿಸುವುದು ಗದ್ಯಪ್ರಬಂಧದ ಕೆಲಸ. ಆದರೆ ಈ ಬಾಹ್ಯವ್ಯಾಪಾರಗಳ ನಡುವೆ ಅಡಗಿಕೊಂಡಿರುವ ಸೂಕ್ಷ್ಮಾಂಶಗಳು ಕೆಲವು ಬೇರೆ ಇದ್ದೇ ಇರುತ್ತವೆ. ಇವು ನಮ್ಮ ಹಿಡಿತಕ್ಕೂ ಲೆಕ್ಕಕ್ಕೂ ಸಿಕ್ಕದ ಅಂತಃಕರಣ ವೃತ್ತಿಗಳು. ಸೈನಿಕರು ವೇತನಾಪೇಕ್ಷೆಯಿಂದ ಯುದ್ಧಕ್ಕೆ ಹೊರಟವರೆ, ಅಥವಾ ದೇಶಾಭಿಮಾನದಿಂದ ಹೊರಟವರೆ? ರಾಜನು ಧರ್ಮಪರನೆ, ಅಥವಾ ಕೇವಲ ರಾಜ್ಯಲೋಭಿಯೆ? ಪ್ರಜಾವರ್ಗವು ಆತನ ಪ್ರಭುತ್ವರೀತಿಯನ್ನು ಮನಸಾ ಅನುಮೋದಿಸಿತ್ತೆ, ಅಥವಾ ಅದಕ್ಕೆ ಹೆದರಿ ವಿಧೇಯವಾಗಿತ್ತೆ? —ಇವೇ ಮೊದಲಾದ ಪ್ರಶ್ನೆಗಳು ಇತಿಹಾಸ ವಿಷಯದ ಸೂಕ್ಷ್ಮಾಂಶಗಳು. ಇವುಗಳನ್ನು ಬಹು ಮಟ್ಟಿಗೆ ಆಯಾ ಸಂದರ್ಭಗಳಿಗೆ ಸಂಬಂಧಪಟ್ಟ ಪ್ರಮುಖ ಪುರುಷರು ಆಡಿದ ಮಾತುಗಳಿಂದಲೂ ತೋರಿದ ನಡತೆಗಳಿಂದಲೂ ಅವರ ಸಾಮಾನ್ಯ ಶೀಲಸ್ವಭಾವಗಳಿಂದಲೂ ಆಗಿನ ಸಾಮಾನ್ಯ ಜನತೆಯ ಆಚಾರ ವ್ಯವಹಾರಗಳ ರೀತಿಯಿಂದಲೂ ಅನುಮಾನಿಸಬೇಕಾಗುವುದು.

ಭರತಖಂಡದ ಪೂರ್ವಚರಿತ್ರೆಗೆ ಸಂಬಂಧಪಟ್ಟ ಮಹಾಸಮಾರಂಭಗಳ ವಿಷಯದಲ್ಲಿ ಇಂತಹ ವಿವರಗಳನ್ನು ತಿಳಿದುಕೊಳ್ಳಲು ಸಾಧನಗಳು ಸಾಲವು. ವಿದ್ಯಾರಣ್ಯರಿಗಿದ್ದ ಅಂತರ್ಭಾವಗಳೆಂತಹುವು, ಅವರು ತಮ್ಮ ಶಿಷ್ಯರಿಗೆ ಮಾಡಿದ ಉಪದೇಶಗಳೆಂತಹುವು, ಹರಿಹರ ಬುಕ್ಕರು ಮಾಡಿದ ಆಲೋಚನೆಗಳೆಂತಹುವು, ಆ ಕಾಲದ ಜನರಿಗಿದ್ದ ಆಶೆ ಆಶಯಗಳೆಂತಹುವು—ಇವುಗಳನ್ನೆಲ್ಲ ತಿಳಿಸುವ ಪ್ರತ್ಯಕ್ಷ ಪ್ರಮಾಣಗಳಾವುವೂ ಇದುವರೆಗೆ ನಮಗೆ ದೊರೆತಿಲ್ಲ. ಈ ವಿವರಗಳನ್ನು ನಾವು ಅನುಮಾನಿಸಿ, ಅಥವಾ ಊಹಿಸಿ, ಮನಸ್ಸಿಗೆ ಗೋಚರಪಡಿಸಿಕೊಳ್ಳಬೇಕಾಗಿದೆ. ಚಿತ್ರ ಬರೆಯುವವನು ಮೊದಲು ತನ್ನ ಮನಸ್ಸಿನೊಳಗಿರುವ ಆಕೃತಿಯ ಮುಖ್ಯಾಂಗಗಳನ್ನು ಕಾಗದದ ಮೇಲೆ, ಅಥವಾ ಪಟದ ಮೇಲೆ, ಸ್ಥೂಲವಾದ ಗೆರೆಗಳಿಂದ ಗುರುತು ಮಾಡಿಕೊಳ್ಳುವನು. ಆಮೇಲೆ ಆ ಸ್ಥೂಲರೇಖೆಗಳ ಮಧ್ಯೆ ಪುಂಖಾನುಪುಂಖಗಳಾದ ಸೂಕ್ಷ್ಮ ರೇಖೆಗಳಿಂದ ಉಪಾಂಗಗಳನ್ನು ಚಿತ್ರಿಸಿ, ನಾನಾವರ್ಣಚ್ಛಾಯೆಗಳಿಂದ ಆ ಆಕೃತಿಯಲ್ಲಿ ಜೀವಕಳೆಯನ್ನು ತುಂಬುವನು. ಈಗ ನಮ್ಮ ಮುಂದಿರುವ ಐತಿಹಾಸಿಕ ಚಿತ್ರಕ್ಕೆ ಬೇಕಾದ ಸ್ಥೂಲರೇಖೆಗಳನ್ನು ಪ್ರಾಚೀನ ಶಿಲಾಲೇಖಗಳೂ ಗ್ರಂಥಗಳೂ ಒದಗಿಸಿವೆ. ಅವುಗಳಿಂದ ಆದ ಹೊರಮೈಯನ್ನು ಮೇಲೆ ಹೇಳಿದ ವಚನ ಪ್ರಬಂಧದಲ್ಲಿ ಕಾಣಬಹುದು. ಹಾಗೆ ಅರ್ಧಸ್ಪಷ್ಟವಾದ ಬಿಂಬದಲ್ಲಿ ಬಿಡು ಬಿಟ್ಟಿರುವ ಭಾಗಗಳನ್ನು ತಕ್ಕ ಸೂಕ್ಷ್ಮ ರೇಖೆಗಳಿಂದ ತುಂಬಿ ಅದನ್ನು ಪೂರ್ತಿಗೊಳಿಸಿ ಅದರ ಒಳಮೈಯನ್ನು ತೋರಿಸುವ ಕೆಲಸವು ಕಾವ್ಯದ ಅಧಿಕಾರಕ್ಕೆ ಸೇರಿದುದು.

ವಿಜಯನಗರ ಪ್ರತಿಷ್ಠಾಪನೆಯ ಸಂದರ್ಭವು ಕನ್ನಡಿಗರಿಗೆ ಅತ್ಯಂತ ಪ್ರಿಯವಾದ ವಿಷಯವೆಂಬುದನ್ನೂ ಅದರ ಅಂತಃಸ್ವರೂಪದ ಜ್ಞಾನವು ಅವರ ಜನಪದ ಶ್ರೇಯಸ್ಸಿಗೆ ಅತ್ಯಂತಾವಶ್ಯಕವಾದ ಸಾಧನವೆಂಬುದನ್ನೂ ಬಹು ಮಾತುಗಳಿಂದ ಹೇಳಬೇಕಾಗಿಲ್ಲ. ಅದು ಹಾಗಿರುವಲ್ಲಿ, ಅಂತಹ ಮಹತ್ವವುಳ್ಳ ಕಥೆಯನ್ನು ಕಾವ್ಯ ಸಾಮ್ರಾಜ್ಯದೊಳಕ್ಕೂ ತಂದು ಅದರ ಆಂತರ ವಿವರಗಳನ್ನು ಎಷ್ಟು ಸ್ವಲ್ಪವಾಗಿಯಾದರೂ ಅಭಿವ್ಯಂಜನಗೊಳಿಸುವ ಪ್ರಯತ್ನವು ಅನುಚಿತವೆನಿಸಲಾರದು.

ಐತಿಹಾಸಿಕ ಕಾವ್ಯ ರಚನೆಗೆ—ಎಂದರೆ ಚರಿತ್ರೆಯ ವಸ್ತುವೇ ವಿಷಯವಾಗುಳ್ಳ ನಾಟಕವನ್ನು ಅಥವಾ ಕಾದಂಬರಿಯನ್ನು ಬರೆಯುವುದಕ್ಕೆ—ಕೈಹಾಕಿ ಕೃತಕೃತ್ಯರೆನ್ನಿಸಿಕೊಂಡವರು ಯಾವ ದೇಶದಲ್ಲಿಯೂ ಬಹು ಮಂದಿಯಿಲ್ಲ. ಐತಿಹಾಸಿಕ ಪ್ರಮಾಣಗಳಿಂದ ಸ್ಪಷ್ಟವಾಗಿ ತಿಳಿದು ಬರುವ ಸಂಗತಿಗಳೂ ಕಾವ್ಯ ಲೇಖಕನು ತನ್ನ ಪ್ರತಿಭೆಯಿಂದ ಕಲ್ಪನೆ ಮಾಡಿಕೊಳ್ಳುವ ಸಂಗತಿಗಳೂ ಪರಸ್ಪರ ಅಸಮಂಜಸಗಳಾದಂತೆಯೂ, ಪಾತ್ರ ಪ್ರಕಾಶನ ಕ್ರಮವೂ ರಸಪರಿಪಾಕ ಕ್ರಮವೂ ಒಂದಕ್ಕೊಂದು ಭಂಗತಾರದೆ ಹೊಂದಿಕೊಳ್ಳುವಂತೆಯೂ, ಅವೆರಡನ್ನೂ ಜೋಡಿಸಬಲ್ಲ ಚತುರರು ಎಲ್ಲಿಯೋ ಕೆಲವರಿರುವರು. ಈ ಕಾರ್ಯದ ದುಷ್ಕರತೆಯು ಹೀಗಿರುವಲ್ಲಿ, ಇಂತಹ ಸಾಹಸಕ್ಕೆ ತೊಡಗಿರುವುದಕ್ಕಾಗಿ ಈ ಲೇಖಕನು ಹೇಳಿಕೊಳ್ಳಬಹುದಾದ ಕಾರಣವು ಅವನಿಗೆ ಈ ವಿಷಯದಲ್ಲಿರುವ ಉತ್ಸಾಹವೊಂದೇ. ತನ್ನ ಈ ಕೃತಿಯನ್ನು ಮಹಾಜನರ ಗಮನಕ್ಕೆ ತರುವುದರಲ್ಲಿ ತಾನು ಎಷ್ಟು ಸಮ್ರನಾಗಿದ್ದರೂ ಸಾಲದೆಂಬುದನ್ನು ಅವನು ತಿಳಿದುಕೊಂಡಿದ್ದಾನೆ.

ಒಂದು ಅಂಶವನ್ನು ವಾಚಕರಿಗೆ ವಿಶೇಷವಾಗಿ ಬಿನ್ನಯಿಸಿಕೊಳ್ಳ ಬೇಕಾಗಿದೆ. ಇದು ಸಾಮಾನ್ಯ ನಾಟಕಗಳಂತೆ ಒಬ್ಬ ವ್ಯಕ್ತಿಯ ಕಥೆ ಯಲ್ಲ. ಒಬ್ಬ ರಾಜನ ಅಥವಾ ರಾಣಿಯ ವ್ಯಥೆ, ವಿರಹ, ಜಯ, ಪರಿಣಯ ಮೊದಲಾದ ವೈಯಕ್ತಿಕ ಸಂಗತಿಗಳನ್ನು ಬಣ್ಣಿಸುವ ನಾಟಕವು ಏಕಮುಖವಾಗಿ ಹರಿಯುವ ನೀರ್ಕಾಲುವೆಯಂತೆ ಇರುವುದು. ಈ ಪ್ರಬಂಧವು ಒಂದು ರಾಜ್ಯದ ಕಥೆ—ಎಂದರೆ ಅಸಂಖ್ಯಾತರಾದ ವ್ಯಕ್ತಿಗಳನ್ನೊಳಗೊಂಡ ಒಂದು ಜನಸಮುದಾಯದ ಹಾನಿವೃದ್ಧಿಗಳ ಕಥೆ. ಇದರ ಮುಖ್ಯ ಪಾತ್ರಗಳು ಅನೇಕ ಮಂದಿ. ಇದು ಗಂಗಾದಿ ಮಹಾನದಿಗಳಂತೆ ಅನೇಕ ಶಾಖೆಗಳಾಗಿ ಒಡೆದು ಬಹುಮುಖವಾಗಿ ಪ್ರವಹಿಸ ತಕ್ಕುದು. ಆದುದರಿಂದ ಸಾಮಾನ್ಯ ನಾಟಕಗಳಲ್ಲಿ ಕಾಣಬರುವಂತಹ ಸಂದರ್ಭೈಕ್ಯವು ಇದರಲ್ಲಿ ಕಾಣಬಾರದೆ ಇರಬಹುದು. ಆದರೂ ಇದರಲ್ಲಿ ರಸೈಕ್ಯವು ಇಲ್ಲದೆ ಇಲ್ಲವೆಂದು ಲೇಖಕನು ಎಣಿಸಿಕೊಂಡಿರುವನು.

ಈ ಕೃತಿಯು ದೃಶ್ಯಕಾವ್ಯದ ರೂಪವನ್ನು ಧರಿಸಿದ್ದರೂ ಇದನ್ನು "ನಾಟಕ" ಅಥವಾ "ರೂಪಕ" ಎಂದು ಆ ಪದಗಳ ವಿಶೇಷಾರ್ಥದಲ್ಲಿ ಕರೆಯಬಹುದೋ ಇಲ್ಲವೋ ಎಂಬ ವಿಷಯದಲ್ಲಿ ಲೇಖಕನಿಗೇ ಸಂದೇಹವುಂಟು. ನಮ್ಮ ಪ್ರಾಚೀನ ಲಾಕ್ಷಣಿಕರು "ರೂಪಕ"ಕ್ಕೆ ಹೇಳಿರುವ ವಿಧಿಗಳನ್ನು ಇದು ಎಷ್ಟು ಮಾತ್ರ ಅನುಸರಿಸಿದೆ ಅಥವಾ ಬಿಟ್ಟಿದೆ ಎಂಬುದು ಶಾಸ್ತ್ರಜ್ಞರು ತಿಳಿಸಿಕೊಡಬೇಕಾದ ವಿಷಯ. ಇದು ಪಾಶ್ಚಾತ್ಯ ರೂಪಕ ಪದ್ಧತಿಯನ್ನನುಸರಿಸಿದೆಯೆಂದೂ ಹೇಳಲಾಗುವಂತಿಲ್ಲ. ಆದರೆ ಈಚೆಗೆ ಪಾಶ್ಚಾತ್ಯ ದೇಶಗಳಲ್ಲಿ ಕವಿಸಮಯವು ಬಹುಮಟ್ಟಿಗೆ ಸ್ವಾತ್ಯಸ್ತವಾಗುತ್ತಿದೆ; ಅನೇಕ ವಿಷಯಗಳಲ್ಲಿ ಅಲ್ಲಿಯ ಲೇಖಕರು ಸ್ವತಂತ್ರ ಮಾರ್ಗಗಳಲ್ಲಿ ಹೊರಟು ಹೊಸ ಸಂಪ್ರದಾಯಗಳಿಗೆ ಮೊದಲು ಮಾಡುತ್ತಿದ್ದಾರೆ. ಕನ್ನಡದಲ್ಲಿ ಇದು ಅಂತಹುದೊಂದು ವಿಲಕ್ಷಣ ಪ್ರಯತ್ನವೆಂದು ವಾಚಕ ಮಹಾಶಯರು ನಕ್ಕರೂ ನಗಬಹುದು, ಅಥವಾ ಕನಿಕರ ತೋರಿದರೂ ತೋರಬಹುದು. ಇದು ಒಂದು ಬರಿಯ ದೃಶ್ಯಚಿತ್ರಗಳ ಪರಂಪರೆ. ಇಂತಹ ವಿಲಕ್ಷಣ ಕೃತಿಗಳು ಕನ್ನಡದಲ್ಲಿ ಅನೇಕವಾಗಿ ಬೆಳೆದು ಒಂದು ವೇಳೆ ಬಹು ಜನದ ಆದರಣೆಗೆ ಪಾತ್ರವಾದರೆ, ಆಗ ಶಾಸ್ತ್ರಜ್ಞರು ಬಹುಶಃ ಈ ಜಾತಿಯ ಪ್ರಬಂಧಗಳಿಗೇ ಬೇರೊಂದು ಹೆಸರನ್ನು ಕಲ್ಪಿಸಿಯಾರು. ಅದುವರೆಗೂ ಇದು "ನಾಟಕ"ವೆಂಬ ಹೆಸರನ್ನು ಸಾಮಾನ್ಯಾರ್ಥದಲ್ಲಿ—ಎಂದರೆ ಔಪಚಾರಿಕವಾಗಿ ಮಾತ್ರ—ಇಟ್ಟುಕೊಳ್ಳಬಹುದೆಂದು ತೋರುತ್ತದೆ.

ಇದು ರೂಪದಲ್ಲಿ ದೃಶ್ಯಕಾವ್ಯದಂತೆ ಕಂಡರೂ, ಇದರ ಪ್ರದರ್ಶನವು ನಮ್ಮ ನಾಟಕಶಾಲೆಗಳ ಪ್ರಕೃತ ಸ್ಥಿತಿಯಲ್ಲಿ ಎಷ್ಟು ಮಟ್ಟಿಗೆ ಜನರಂಜಕವಾದೀತು ಎಂಬುದನ್ನು ಆ ವೃತ್ತಿಯ ಅನುಭವವುಳ್ಳವರು ನಿಶ್ಚಯಿಸಬೇಕಾಗಿದೆ. ಅದು ಹೇಗಾದರಾಗಲಿ, ನಮ್ಮ ದೇಶದಲ್ಲಿಯೂ ಇತರ ದೇಶಗಳಲ್ಲಿಯೂ ಪಠ್ಯ ಕಾವ್ಯಗಳು ಮಾತ್ರವೇ ಆದ ದೃಶ್ಯ ಕಾವ್ಯಗಳು ಎಷ್ಟೋ ಇವೆ. ಇದು ಅವುಗಳಂತಹುದಿನ್ನೊಂದು ಆದರೂ ಆಗಬಹುದು. ಇದರ ದೃಶ್ಯತೆಯು ಸದ್ಯಃ ಮನಶ್ಚಕ್ಷುವಿಗೆ, ಚರ್ಮಚಕ್ಷುವಿಗಲ್ಲ.

ಈ ಆವೃತ್ತಿಯಲ್ಲಿ ಗ್ರಂಥವನ್ನು ಸಾಧ್ಯವಾದ ಮಟ್ಟಿಗೆ ಪರಿಶೋಧಿಸಿದೆ.

ಗ್ರಂಥವನ್ನು ಓದಿನೋಡಿ ಮೆಚ್ಚುಗೆಯನ್ನು ತಿಳಿಯಪಡಿಸಿ ಪ್ರೋತ್ಸಾಹಿಸಿರುವ ಮಿತ್ರರಿಗೂ, ಇದನ್ನು ಪಠ್ಯ ಪುಸ್ತಕವಾಗಿ ಮಾಡಿ ಈ ದ್ವಿತೀಯ ಮುದ್ರಣಕ್ಕೆ ಅವಕಾಶವನ್ನು ಕಲ್ಪಿಸಿರುವ ಮೈಸೂರಿನ ವಿಶ್ವವಿದ್ಯಾಪೀಠದ ಅಧಿಕಾರಿಗಳಿಗೂ ವಿದ್ಯಾ ಪ್ರಚಾರದ ಇಲಾಖೆಯ ಅಧಿಕಾರಿಗಳಿಗೂ ಮದ್ರಾಸಿನ ವಿಶ್ವವಿದ್ಯಾಪೀಠದವರಿಗೂ ಸಹ ಲೇಖಕನು ಅತ್ಯಂತ ಕೃತಜ್ಞನಾಗಿರುವನು.

ಆಗಸ್ಟು ೧೯೨೮. ಡಿ. ವಿ. ಜಿ.

## ವಿಷಯ ಸೂಚಿಕೆ

# ಪಾತ್ರಗಳ ವಿವರ

---

ಮಾಧವ (ವಿದ್ಯಾರಣ್ಯ)—ಕಥಾನಾಯಕ
ಶ್ರೀಮತಿ—ಆತನ ತಾಯಿ
ಸಾಯಣ—ಆತನ ತಮ್ಮ
ವೇಂಕಟನಾಥಾರ್ಯ (ವೇದಾಂತ ದೇಶಿಕ)—ಆತನ ಮಿತ್ರ
ಹರಿಹರರಾಜ—ಮಾಧವ-ವಿದ್ಯಾರಣ್ಯರ ಶಿಷ್ಯ
ಬುಕ್ಕರಾಜ—ಹರಿಹರರಾಜನ ತಮ್ಮ
ಇಮ್ಮಡಿ ಹರಿಹರ—ಬುಕ್ಕರಾಜನ ಮಗ
ಗೋಪಣ್ಣ—ಬುಕ್ಕರಾಜನ ದಂಡಾಧಿಪತಿ
ಸುದರ್ಶನಾಚಾರ್ಯ—ವೇಂಕಟನಾಥಾರ್ಯರ ಸ್ನೇಹಿತ
ವೇದವತಿ—ಸುದರ್ಶನಾಚಾರ್ಯರ ಭಾರ್ಯೆ
ವೇದಾಚಾರ್ಯ, ಪರಾಶರ—ಸುದರ್ಶನಾಚಾರ್ಯರ ಮಕ್ಕಳು
ಪರಾಂಕುಶಭಟ್ಟ, ಕೇಶವದಾಸ, ವಾತೂಲದೇಶಿಕ—ಶ್ರೀರಂಗದ ಶ್ರೀವೈಷ್ಣವ ಪ್ರಮುಖರು
ರಾಮಕೃಷ್ಣ—ವಿದ್ಯಾರಣ್ಯರ ಶಿಷ್ಯ
ಸೋಮಶೇಖರ—ರಾಮಕೃಷ್ಣನ ಸ್ನೇಹಿತ
ತ್ರಿವಿಕ್ರಮಶಾಸ್ತ್ರಿ, ತ್ರ್ಯಂಬಕಶಾಸ್ತ್ರಿ, ಚಂದ್ರಶೇಖರಶಾಸ್ತ್ರಿ—ಇತರ ಬ್ರಾಹ್ಮಣರು
ಕೃಷ್ಣರಾಜ—ಓರಗಲ್ಲಿನ ದೊರೆ
ಸಿಂಗಣ್ಣ— ,, ಮಂತ್ರಿ
ಪದ್ಮರಾಜ ಪಂಡಿತ—ವಿಜಯನಗರದ ಜೈನ ಪ್ರಮುಖ
ತಾತಾಚಾರ್ಯ— ,, ಶ್ರೀವೈಷ್ಣವ ಪ್ರಮುಖ
ವೃದ್ಧ ಬ್ರಾಹ್ಮಣ, ಶ್ರೀವೈಷ್ಣವರು, ಪುರಜನರು, ಗಾಯಕ, ನರ್ತಕಿಯರು, ನರ್ಮ ಸಚಿವರು, ಕೋಲಾಟದವರು, ದೂತ, ಕಂಚುಕಿ—ಮೊದಲಾದವರು.

# ಶ್ರೀ ವಿದ್ಯಾರಣ್ಯ ವಿಜಯ

(ವೃತ್ತ)

ಶ್ರೀಮದ್ವೇದವಚಃ ಪ್ರಕೀರ್ತ್ಯ ಮಹಿಮಂ ವಿಶ್ವವ್ಯವಸ್ಥಾಪನೋ।
ದ್ದಾಮಪ್ರಾಭವನಪ್ರಮೇಯಕರಣಂ ನಿರ್ಲಿಪ್ತನಾದ್ಯಂ ಪರಂ ॥
ವ್ಯಾಮೋಹಾಂಧ್ಯನಿವಾರಣ ಪ್ರವಣ ಸಚ್ಚಿಜ್ಜ್ಯೋತಿರೂಪಂ ಶಿವಂ।
ಪ್ರೇಮಾಪಾಂಗದೆ ವೀಕ್ಷಿಸುತ್ತೆ ಜಗಮಂ ಪಾಲಿಕ್ಕೆ ಸಂಪಾಥವಂ ॥

ಉದ್ವೃತ್ತದ್ಯೋತಲೀಲಾಕ್ರಮದಲಿ ತಮವಂ ನೀಗಿ ಕರ್ಣಾಟದೊಳ್ ಸ।
ದ್ವಿದ್ಯಾನಂದಂಗಳಂ ಸೂಸಿದ ವಿಬುಧವರಂ ಬ್ರಹ್ಮಧರ್ಮಾವತಾರಂ ॥
ಹೃದ್ಯೋದಂತಂ ಮಹಾಂತಂ ಪ್ರಥಿತಕೃತಿಶತಂ ಲೋಕಮಾನ್ಯಂ ವದಾನ್ಯಂ।
ವಿದ್ಯಾರಣ್ಯಂ ವರೇಣ್ಯಂ ನೆಲಸುಗೆ ಮನದೊಳ್ ಯೋಗಿವೃಂದಾಗ್ರಗಣ್ಯಂ ॥

[ಸೂತ್ರಧಾರನು ಹೀಗೆ ಸ್ತೋತ್ರಮಾಡಿ ಪುಷ್ಪಾಂಜಲಿಯನ್ನೆರಚಿ ತೆರಳುವನು.]

## ಭಾಗ ೧—ಪ್ರೇರಣೆ

## ದೃಶ್ಯ ೧

[ಸ್ಥಳ: ಒಂದು ಹಳೆಯ ಮಣ್ಣುಮನೆ. ವೇಳೆ: ಮಧ್ಯರಾತ್ರಿ. ಒಳಗೆ ಒಂದು ಮಣ್ಣುಹಣತೆಯು ಮಂಕಾಗಿ ಉರಿಯುತ್ತಿರುವುದು. ಮಾಧವಭಟ್ಟರು ಒಂದು ಓಲೆಯ ಪುಸ್ತಕವನ್ನು ಬಿಚ್ಚಿ ಕೈಯಲ್ಲಿ ಹಿಡಿದು, ದರ್ಭಾಸನದಮೇಲೆ ಚಿಂತಾಕ್ರಾಂತರಾಗಿ ಕುಳಿತಿರುವರು. ಅವರ ಮುಂದೆ ವ್ಯಾಸಪೀಠ, ಸುತ್ತುಮುತ್ತ ಓಲೆಯ ಪುಸ್ತಕಗಳು, ಬರೆಯುವ ತಾಳಪತ್ರ—ಇವು ಇರುವುವು.]

**ಮಾಧವ**—ಎಂತಹ ಅದೃಷ್ಟ ನನ್ನದು! ಶ್ರಮೆಪಟ್ಟು ವಿದ್ಯೆ ಕಲಿತಿದ್ದರೇನು,—ಅದನ್ನು ಪುರಸ್ಕರಿಸುವವರಿಲ್ಲ. ಸಾಂಗವಾಗಿ

ಬ್ರಹ್ಮಚರ್ಯವನ್ನು ನಡೆಸಿದ್ದರೇನು,—ಗಾರ್ಹಸ್ಥ್ಯಕ್ಕೆ ಮಾರ್ಗವಿಲ್ಲ. ಆಗಿರುವ ವಯಸ್ಸನ್ನು ನೋಡಿಕೊಂಡರೆ, ವಾನಪ್ರಸ್ಥಕ್ಕೆ ತಕ್ಕ ಕಾಲವು ಸಮೀಪವಾಗಿದೆ; ಮಾಡಿರುವ ಲೋಕಯಾತ್ರೆಯನ್ನು ನೋಡಿಕೊಂಡರೆ, ಇನ್ನೂ ನಡುದಾರಿಯವರೆಗೆ ಕೂಡ ಬಂದಂತಿಲ್ಲ. ಈ ದೇಹವು ಒಂದು ದಿನವಾದರೂ ಸುಖವನ್ನು ಕಂಡುದಲ್ಲ; ಈ ಮನಸ್ಸು ಒಂದು ಗಳಿಗೆಯಾದರೂ ಶಾಂತಿಯನ್ನರಿತುದಲ್ಲ . . . . . . . . . ತಾಯಿ, ಭುವನೇಶ್ವರಿ, ನೀನು ಇಂದು ಒಲಿಯುವೆ, ನಾಳೆ ಒಲಿಯುವೆ—ಎಂದು ನಂಬಿ ಪುರುಷಾಯುಷ್ಯದಲ್ಲಿ ಅರ್ಧವನ್ನು ಕಳೆದುದಾಯಿತು; ಇನ್ನೂ ಯಾವ ಪುರುಷಾರ್ಥವನ್ನೂ ಸಾಧಿಸಿದಂತೆ ಆಗಿಲ್ಲ. ಇದಕ್ಕಿಂತ ಒಂದು ಪಶುವಾಗಿಯೋ ಮರವಾಗಿಯೋ ಹುಟ್ಟಿದ್ದಿದ್ದರೆ ನಿಶ್ಚಿಂತನಾಗಿ, ನಾಲ್ವರಿಗುಪಕಾರಿಯಾಗಿ ಬಾಳಬಹುದಾಗಿತ್ತಲ್ಲವೆ? . . . . ನಿನ್ನನ್ನು ನಂಬಿದವರಿಗೆ ತಕ್ಕ ಗತಿ ಇಂತಹುದೆಂದು ಹೇಗೆ ನಂಬಲಿ? ಈಗಲಾದರೂ ಪ್ರಸನ್ನಳಾಗಲಾರೆಯಾ? ಎಷ್ಟೋ ವರ್ಷಗಳಿಂದ ಹಂಬಲಿಸುತ್ತಿರುವೆನಲ್ಲಾ! ನೀನೇನು ಅದರಿಂದ ಬೇಸರಗೊಂಡಿರುವೆಯಾ? ಲೋಕದಲ್ಲಿ ಮಗು ಅಳುತ್ತಿದ್ದರೆ ಅದರ ಇಷ್ಟವನ್ನು ನಡೆಯಿಸಲಾರದ ತಾಯಿ ಬೇಸರಪಡುವುದುಂಟು. ನೀನೇನು ಅಂತಹ ಅಶಕ್ತಳೆ? ನೀನೊಲಿದು ನೋಡಿದರೆ ಬರಲಾರದ ಭಾಗ್ಯವಾವುದು? ಹೀಗೆ ನಾನು ಕಾದು ಕಾದು ನನ್ನ ಆಶೆಯು ಇಂಗಿಹೋದ ಬಳಿಕ ನೀನು ಯಾವ ಭಾಗ್ಯವನ್ನು ಕೊಟ್ಟರೆ ನನಗೆ ಅದರಿಂದೇನು? . . . . ನೀನೇನು ನನ್ನನ್ನು ಪರೀಕ್ಷಿಸುತ್ತಿರುವೆಯಾ? ನಾನು ದೀನ, ದರಿದ್ರ, ದುರ್ಬಲ, ಗತಿಹೀನ. ಅದನ್ನು ನಾನೇ ನಿನಗೆ ಹೇಳಿಕೊಳ್ಳುತ್ತಿದ್ದೇನೆ. ನೀನೇ ಅದನ್ನು ಬಲ್ಲೆ. ಇಂತಹವನನ್ನು ಪರೀಕ್ಷಿಸುವುದರಲ್ಲಿ ಕೀರ್ತಿಯೇನು? ನನ್ನ ಭಕ್ತಿ ವಿಶ್ವಾಸಗಳನ್ನು ಮುರಿಯಬೇಕೆಂದಿರುವೆಯಾ? ಬೇಡ; ಅದು ನಿನ್ನಿಂದಾಗದು.

(ಕಂದ) ತನುಜಂ ಮಮತೆಯ ಬಿಡೆಯುಂ।
ಜನಯಿತ್ರಿಯು ತೊರೆಯಳವನನೆಂಬುದು ಲೋಕಂ॥

ಮುನಿದಿರೆ ನೀಂ ತಾಯೆ ಬಳಿ।
ಕ್ಕನುರಾಗದಿ ನೋಡುತೆನ್ನ ಸಲಪುವರಾರ್ ॥

[ಹೀಗೆ ಹಂಬಲಿಸಿ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಹಾಗೆಯೇ ಸ್ತಬ್ಧನಾಗುವನು.]

[ರಂಗಸ್ಥಳದ ಒಂದು ಪಕ್ಕದಲ್ಲಿ ಪ್ರಲಾಪ—ಹಾಡು. ರಾಗ: ನೀಲಾಂಬರಿ.]

ಪತಿಯು ಮರೆತೆನ್ನನೂಕೆ—ಸುತರು ಮಾನಹೀನರಾಗೆ।
ಕ್ಷಿತಿಯು ದುರುಳರದಾಗೆ—ಗತಿಯದಾರು—
ಗತಿಯದಾರೋ—ಎನಗೆ ಹಿತರದಾರೋ ॥ ೧ ॥

ನಾಥನೇ ಕಾಯದೆ ತಸು—ಜಾತರು ಭೀತಿಯನೊಂದಿ।
ಖ್ಯಾತಿಯು ಕಳೆಯುತಿರೆ—ಉಳಿವುದೆಂತು—
ಉಳಿವುದೆಂತೋ—ದಿನವ ಕಳೆವುದೆಂತೋ ॥ ೨ ॥

ಹೆರರ ಹಿಂಸೆಯನು ನೀಗಿ—ಪರರಿಗುಪಕಾರಿಯಾಗಿ।
ಧರೆಯೊಳು ಮಾನಿತಳಾಗಿ—ನಡೆವುದೆಂದು—
ನಡೆವುದೆಂದೋ—ಶುಭವ ಪಡೆವುದೆಂದೋ ॥ ೩ ॥

**ಮಾಧವ**—(ಎಚ್ಚತ್ತು) ಇದೇನು ಆರ್ತಧ್ವನಿ? . . . .(ಎದ್ದು ಹೊರಕ್ಕೆ ಬಂದು ಮೇಲೆ ನೋಡಿ) ಅರ್ಧ ರಾತ್ರಿಯಾದಂತಿದೆ. ಇಷ್ಟು ಹೊತ್ತಿನಲ್ಲದಾರು ಹೀಗೆ ಪ್ರಲಾಪಿಸುತ್ತಿರುವರು?

[ಪ್ರವೇಶ: ಒಬ್ಬ ಮುದುಕಿ ಕೋಲೂರಿಕೊಂಡು ಮೇಲಿನ ಹಾಡನ್ನು ಹೇಳುತ್ತ ಬರುವಳು.]

ಸಿರಿತನದಿ ಮುನ್ನ ಸುಖಿಸಿ—ಧರೆಯು ಮನ್ನಣೆಯ ಗಳಿಸಿ।
ತಿರುಕಿಯಾಗಿ ತಿರುಗುತೀಗ—ಬಾಳ್ವೆನೆಂತು—
ಬಾಳ್ವುದೆಂತೋ—ಅಸುವ ತಾಳ್ವುದೆಂತೋ ॥ ೪ ॥

**ಮಾಧವ**—(ಆ ಮುದುಕಿಯ ಕಡೆ ತಿರುಗಿ) ಅಮ್ಮಾ, ನೀನು ಯಾರು?

**ಮುದುಕಿ**—ಅಪ್ಪಾ, ನಾನೊಬ್ಬ ಭಿಕ್ಷುಕಿ; ಲೋಕದ ಕನಿಕರವನ್ನು ಹುಡುಕಿಕೊಂಡು ಬಂದಿದ್ದೇನೆ.

**ಮಾಧವ**—ಅಯ್ಯೋ, ನಿನ್ನ ಗೋಳಾಟವು ನನ್ನ ಕಿವಿಗೆ ಶೂಲ ಪ್ರಾಯವಾಗಿರುವುದಲ್ಲಾ !

**ಮುದುಕಿ**—ಅಯ್ಯಾ, ಗೋಳಾಡುವ ನನ್ನ ಬಾಯಿ ಪಾಪವನ್ನು ಕಟ್ಟಿಕೊಂಡರೆ ಗೋಳನ್ನು ಹೋಗಲಾಡಿಸುವ ನಿನ್ನ ಕೈ ಪುಣ್ಯವನ್ನು ಕಟ್ಟಿಕೊಳ್ಳಬಹುದಲ್ಲವೇ ?

**ಮಾಧವ**—ಲೋಕವೆಲ್ಲವೂ ನಿದ್ರಿಸುತ್ತಿರುವ ಹೊತ್ತಿನಲ್ಲಿಯೇ ನಿನ್ನ ಗೋಳಾಟ?

**ಮುದುಕಿ**—ಅಪ್ಪಾ, ಗೋಳಾಟಕ್ಕೆ ಹೊತ್ತನ್ನಾರು ಗೊತ್ತು ಮಾಡಿರುವರು ? ಸಂಕಟವಾದಾಗ ಎಲ್ಲರೂ ಗೋಳಾಡತಕ್ಕವರೇ. ಮನೆಯಿರುವವರು ಒಳಗೆ ಗೋಳಿಡುತ್ತಾರೆ; ಮನೆಯಿಲ್ಲದವರು ಬೀದಿಯಲ್ಲಿ ಗೋಳಿಡುತ್ತಾರೆ.

**ಮಾಧವ**—(ಸ್ವಗತ) ಇದೇನು, ಈಕೆಯ ಮಾತು ನನ್ನನ್ನೇ ಹಂಗಿಸುವಂತಿದೆ! ಇರಲಿ! (ಪ್ರಕಾಶ) ತಾಯಿ, ಈ ಅವೇಳೆಯಲ್ಲಿ ನಿಮಗಾರು ತಾನೆ ಏನು ಮಾಡಬಹುದು ?

**ಮುದುಕಿ**—ಆರ್ತರಿಗೂ ಉಪಕಾರಿಗೂ ಅವೇಳೆ ಯಾವುದು, ವೇಳೆ ಯಾವುದು ? ಒಬ್ಬರನ್ನೊಬ್ಬರು ಹುಡುಕುತ್ತಿರುವುದೇ ಅವರಿಗೆ ಯಾವಾಗಲೂ ಇರುವ ಕೆಲಸ.

**ಮಾಧವ**—ನಿಮಗೆ ಸದ್ಯಃ ಆಗಬೇಕಾದುದೇನು ?

**ಮುದುಕಿ**—ಎಲ್ಲವೂ ಬೇಕು—ಆಹಾರ ಬೇಕು, ವಸ್ತ್ರ ಬೇಕು, ಆಶ್ರಯ ಬೇಕು. (ನಡುಗುತ್ತ) ಹಾ! ಛಳಿ! ಸಂಕಟ! ತಡೆಯಲಾರೆ!

**ಮಾಧವ**—ಶಿವ ಶಿವಾ! ಈ ದುಃಖವೂ ನನ್ನಂತಹ ನಿರ್ಭಾಗ್ಯ ನಿದಿರಿಗೇ ಬರಬೇಕೆ?

**ಮುದುಕಿ**—ಅದೇಕಪ್ಪಾ, ಹಾಗೆನ್ನುವೆ?

**ಮಾಧವ**—ಅಮ್ಮಾ, ನಾನೇ ದಾರಿದ್ರ್ಯದಲ್ಲಿ ನರಳುತ್ತಿರುವಾಗ ಇತರರಿಗೆ ಹೇಗೆ ಸಹಾಯವಾದೇನು ?

**ಮುದುಕಿ**—ಪುತ್ರಕಾ, ಹಾಗೆನ್ನಲಾಗದು. ನೀನು ಬ್ರಾಹ್ಮಣನಲ್ಲವೆ? ಯಥಾವಿಧಿಯಾಗಿ ಗುರುಶುಶ್ರೂಷೆ ಮಾಡಿದವನಲ್ಲವೆ? ವೇದ ವೇದಾಂಗಗಳ ರಹಸ್ಯವನ್ನು ಕಂಡವನಲ್ಲವೆ? ಅದಕ್ಕೆ ಮಿಂಚಿದ ಭಾಗ್ಯವುಂಟೆ?

**ಮಾಧವ**—(ವಿಸ್ಮಿತನಾಗಿ, ಸ್ವಗತಂ) ಆಹಾ! ಇದೇನು ಈಕೆ ಪರಿಚಿತಳಾದವಳಂತೆ ಮಾತನಾಡುವಳು? (ಪ್ರಕಾಶಂ) ತಾಯಿ, ನೀವು ಯಾರು? ನನ್ನನ್ನು ಬಲ್ಲಿರಾ?

**ಮುದುಕಿ**—ಮಗೂ, ಮಾಧವ, ಹೆತ್ತವರನ್ನೂ ಮರೆಯಿಸಬಲ್ಲ ಕಲಿಕಲ್ಮಷವು ಪಂಡಿತನಾದ ನಿನ್ನ ಕಣ್ಣು ಕಿವಿಗಳನ್ನೂ ಮುಸುಕಿದೆಯೆ?

**ಮಾಧವ**—(ಸ್ವಗತಂ) ಈಕೆಯ ಧ್ವನಿ ನಮ್ಮ ತಾಯಿಯ ಧ್ವನಿಯಂತಿದೆ! ಅಲ್ಲವೆ? (ದೃಷ್ಟಿಸಿ ನೋಡಿ) ಆಹ! ಶ್ರೀಮತೀದೇವಿಯೇ ಇಲ್ಲಿ ನಿಂತಿರುವಂತಿದೆ! ಇದೇನು? (ಪ್ರಕಾಶಂ) ಅಮ್ಮಾ, ತಾಯಿ, ಅಪರಾಧವಾಯಿತು, ಕ್ಷಮೆ ತೋರು. ನಿನ್ನ ಚರಣಕಮಲಗಳಲ್ಲಿ ಈ ಬೇಯುವ ತಲೆಯನ್ನಿಡುವೆನು.

[ಪ್ರಣಾಮಮಾಡಲು ಮಲಗುವನು. ಮುದುಕಿಯು ಅದೃಶ್ಯಳಾಗುವಳು.

ಸಂತಯಿಸು; ಕೃಪೆಮಾಡು.........(ಎದ್ದು ನೋಡಿ) ಏನಿದು? ಇಲ್ಲಿ ಯಾರೂ ಇಲ್ಲವಲ್ಲ! ನನಗೇನು ಸ್ವಪ್ನವೊ? ಭ್ರಾಂತಿಯೊ?...... ಎಂದೋ ಬಿಟ್ಟುಹೋದ ತಾಯಿ ಇಂದು ಹೇಗೆ ಇಲ್ಲಿಗೆ ಬಂದಾಳು? ಈ ಅದ್ಭುತವನ್ನೇನೆಂದು ಬಗೆಯಲಿ?

[ರಂಗಸ್ಥಳದ ಒಂದು ಪಕ್ಕದಲ್ಲಿ, ತೆರೆಯ ಹಿಂದೆ.

**ಮುದುಕಿ**—ಕುಮಾರಕಾ, ವಿವಾಹವಾಗಲಿಲ್ಲವೆಂದೂ, ಸಂಪತ್ತು ಬರಲಿಲ್ಲವೆಂದೂ, ಸುಖವನ್ನು ಕಾಣಲಿಲ್ಲವೆಂದೂ ಮರುಗುತ್ತಿದ್ದೆಯಲ್ಲವೆ? ನನ್ನ ಅವಸ್ಥೆಯನ್ನು ನೋಡಿದೆಯಾ?

**ಮಾಧವ**—ಇದೇನು, ನನ್ನ ಮನಸ್ಸೇ ನನ್ನೊಡನೆ ಆಟವಾಡುತ್ತಿರುವುದೋ? (ಆ ಕಡೆ ದೃಷ್ಟಿಸಿ ನೋಡಿ) ಅಹಹ! ಮಾತೃರೂಪವೇ ಪುನಃ

ಇಲ್ಲಿ ಕಾಣಿಸುತ್ತಿದೆ! (ಒಂದು ಹೆಜ್ಜೆ ಮುಂದಕ್ಕೆ ನಡೆದು) ಶಿವ ಶಿವಾ! ಶಿವ ಶಿವಾ!! ಅರ್ಧ ಬೆತ್ತಲೆ ನಿಂತು ಗಡಗಡನೆ ನಡುಗುತ್ತಿರುವಳಲ್ಲಾ! ಇದೆಂತಹ ಘೋರಾವಸ್ಥೆ! ನಾನೆಂತಹ ಪಾಪಿ! ಹೆತ್ತವಳಿಗೆ ಈ ಗತಿ ಬಂದಿರುವುದನ್ನು ನೋಡಬೇಕಾಗಿರುವುದಲ್ಲಾ! ಶಿವ ಶಿವಾ, ನನ್ನ ಪ್ರಾಚೀನ ಕರ್ಮವೇ ಈ ರೂಪದಲ್ಲಿ ಬಂದು ನನ್ನನ್ನು ಅಣಕಿಸುತ್ತಿರುವುದೋ ಏನು?

**ಮುದುಕಿ**—ಮಾಧವಾ, ಇನ್ನಾದರೂ ನನ್ನ ಕಷ್ಟವನ್ನು ಮರೆಯುದಿರುವೆಯಾ?

**ಮಾಧವ**—ತಾಯೆ, ಮನ್ನಿಸು; ದಯೆ ತೋರು; ನೈಜವಾದ ಮುಗುಳ್ನಗೆಯಿಂದ ನನ್ನನ್ನು ನೋಡು. ನಿನ್ನ ಹೀನದಶೆಯನ್ನರಿಯದೆ, ನನ್ನ ಉತ್ತಮ ಗತಿಯನ್ನು ಬಗೆಯದೆ, ಅಜ್ಞಾನವಶನಾಗಿ ಮಾಡಿದ ದೋಷವನ್ನು ಮರೆತುಬಿಡು. ಜನ್ಮವನ್ನಿತ್ತವಳು ಹೊಟ್ಟೆ ಬಟ್ಟೆಗಳಿಗಾಗಿ ಹಂಬಲಿಸುತ್ತಿದ್ದರೆ ನೋಡಿ ಮನಕರಗದೆ ಇರುವಷ್ಟರ ನೀಚನೆ ನಿನ್ನ ಮಗನು? ಜನನೀ, ನೀನೇ ಪ್ರತ್ಯಕ್ಷ ದೇವತೆಯೆಂದು ತಿಳಿದಿದ್ದೆನಲ್ಲವೆ ನಾನು? ಈಗಲೂ ನಿನ್ನ ಸೇವೆಮಾಡುವ ಶಕ್ತಿ ನನಗೆ ಸಂಪೂರ್ಣವಾಗಿರುವಂತೆ ಹರಸು. ಹಾಗೆ ಹರಸಿ ನನ್ನನ್ನು ಧನ್ಯನನ್ನಾಗಿ ಮಾಡು. (ಇನ್ನೂ ಮುಂದೆ ನಡೆದು) ಏನಿದು? ಇಲ್ಲಿ ಏನೂ ಕಾಣುವುದಿಲ್ಲ! ನನಗೇನು ಬುದ್ಧಿ ವಿಕಲ್ಪವೊ? ಇಲ್ಲದಿದ್ದರೆ ಯಾರಾದರೂ ಮಾಡುತ್ತಿರುವ ಇಂದ್ರಜಾಲವೋ ಇದು? ಹಾಗೂ ಅಲ್ಲದಿದ್ದರೆ ಹೀಗಾಗುವುದಕ್ಕೆ ಕಾರಣವೇನಿದ್ದೀತು? ಅಂದು ಕಳೆದುಕೊಂಡ ತಾಯಿಯನ್ನು ಇಂದು ಕಾಣುವುದೆಂದರೇನು? ಪುಣ್ಯಲೋಕಗಳಲ್ಲಿರುವ ಆಕೆಗೆ ಕಷ್ಟಪ್ರಾಪ್ತಿಯೆಂದರೇನು? ಇದನ್ನೇನೆಂದು ಭಾವಿಸಲಿ? ಮತಿಭ್ರಮಣೆಯೆ? ಮಾಂತ್ರಿಕರ ಮಾಟವೆ?

[ರಂಗಸ್ಥಳದ ಮತ್ತೊಂದು ಕಡೆ ಹೊಳಪು.

ಅದೇನಲ್ಲಿ ಪ್ರಕಾಶ? (ಆ ಕಡೆ ತಿರುಗಿ) ಓಹೋ! ಇದಾವ ತೇಜಸ್ಸು? ಅತಿ ವಿಚಿತ್ರವಾಗಿರುವುದಲ್ಲಾ ಈ ರಾತ್ರಿ! (ಮುಂದೆ ನಡೆದು) ಇದಾವ ದಿವ್ಯ

ಮೂರ್ತಿ? . . . . . . ಆಹ! ಪುನಃ ಮಾತೃರೂಪವೇ . . . . . . . (ಮುಂದಕ್ಕೆ ನಡೆದು) ಆಹಾ! ಗಾಯತ್ರೀ ದೇವಿಯೇ ಸಾಕ್ಷಾತ್ತಾಗಿ ಬಂದಿರುವಳು! ಅದೋ ಕಿರೀಟದಲ್ಲಿ ಚಂದ್ರಕಳೆ! ಅದೋ ಶಂಖ ಚಕ್ರ ಕಶಾಂಕುಶಗಳು! ಅದೋ ಮಂದಹಾಸದಿಂದ ನನ್ನನ್ನೇ ನೋಡುತ್ತಿರುವಳು! ತಾಯೆ!—

(ಸೀಸ) ಜಯ ಜಯ ಜಗದಂಬೆ ಸೌಭಾಗ್ಯ ನಿಕುರುಂಬೆ
ಸಕಲ ವಿದ್ಯಾಲಂಬೆ ಧರ್ಮ ಬಿಂಬೆ।
ಸತ್ಯಚಿದ್ರಸರೂಪೆ ನಿತ್ಯಸೌಖ್ಯಕಲಾಪೆ
ವಾರಿತಾಖಿಲತಾಪೆ ವಿಗತಪಾಪೆ।
ವೇದಶಾಸ್ತ್ರನಿದಾನೆ ವಿಪುಲಸನ್ಮತಿದಾನೆ
ಪೋಷಿತಾಖಿಲದೀನೆ ವಿಶ್ವವಸನೆ।
ಋಷಿಗಣಾರ್ಚಿತಪಾದೆ ರಾಜ್ಯತಂತ್ರವಿನೋದೆ
ನಿಗಮಾಂತವೇದ್ಯಪದೆ ನಿಖಿಲಫಲದೆ ॥

ಶ್ರೀಮತೀ ಸಾವಿತ್ರಿ ಗಾಯತ್ರಿ ಲೋಕಧಾತ್ರಿ।
ಲಲಿತೆ ಪರದೇವತೆ ಪರಬ್ರಹ್ಮದಯಿತೆ।
ಪಿಡಿದಿರುವೆ ನಿನ್ನ ಪದಕಮಲಗಳನಳ್ತಿಯಿಂದೆ।
ಪೊರೆಯೆನ್ನ ತಾಯೆ ನೀನೊಲವಿಂದೆ ಮುದವ ತೋರಿ ॥

(ಕಂದ) ತನಯನ ಬೇಡಲದೇಂ ಮ।
ಜ್ಜನನೀ ನಿಯಮಿಪುದು ಕಾರ್ಯರೀತಿಯ ನೆನ್ನೀ ॥
ತನು ನಿನ್ನದು ಮನ ನಿನ್ನದು।
ಘನಗುರುವಿತ್ತೆಲ್ಲ ಕಲೆಯು ನಿನ್ನದು ದೇವೀ ॥

**ಗಾಯತ್ರಿ**–(ಕಂದ) ಜಯಮಕ್ಕೆ ನಿನಗೆ ಕುವರನೆ।
ಜಯಮಕ್ಕೀ ಜನಪದಕ್ಕೆ ನಿನ್ನಿಂ ನಿಚ್ಚಂ ॥
ಜಯಮಕ್ಕೆ ವೇದನಿಚಯಕೆ।
ಜಯಮಕ್ಕಾರ್ಷೇಯ ಧರ್ಮಸಂಪದಕನಿಶಂ ॥

[ಅದೃಶ್ಯಳಾಗುವಳು.

**ಮಾಧವ**—ದೇವಿ, ಇಷ್ಟು ಬೇಗನೆ ಅದೃಶ್ಯಳಾಗುವುದೆ? ನಾನು ಕಣ್ಣಾರ, ಮನಸಾರ, ನಿನ್ನನ್ನು ನೋಡಬೇಡವೆ? ನನ್ನಂತಹವನ ದೃಷ್ಟಿಯು ಸಂಪೂರ್ಣವಾಗಿ ನಿನ್ನ ಮೇಲೆ ಬೀಳಬಾರದೆ? ಹಾಗೂ ಇರಲಿ! ನಿನ್ನನ್ನು ಮೆಚ್ಚಿಸಿ ನಿನ್ನ ಪೂರ್ಣ ದರ್ಶನವನ್ನು ಸಂಪಾದಿಸುವೆನು. ಇಂದು ನೀನು ತೋರಿದ ವಿಲಾಸವೇ ಪರಮಾನುಗ್ರಹವಲ್ಲವೆ? ದೀನವತ್ಸಲೆ, ನನ್ನ ಸೇವೆಯನ್ನು ಬಯಸಿ ನನಗೆ ಜನ್ಮಪಿತೃವಳಂತೆ ವೇಷತಾಳಿ ಬಂದೆಯಾ? ಅದೊಂದು ವಿಶ್ವಾಸವೇ ಅಲ್ಲವೆ? ಎಲ್ಲ ತಾಯಿತಂದೆಗಳಿಗೂ ತಾಯಿತಂದೆಯಾಗಿ, ಎಲ್ಲ ಬಂಧುಗಳಿಗೂ ಪರಮಬಂಧುವಾಗಿ, ಎಲ್ಲ ನೀತಿಗೂ ಮೂಲಾಧಾರಳಾಗಿ, ಎಲ್ಲ ಸುಖಕ್ಕೂ ಪೂರ್ಣಾಶ್ರಯಳಾಗಿರುವ ನಿನ್ನನ್ನು ನಾನು ಹೇಗೆತಾನೆ ಮರೆತೇನು? (ಆಲೋಚಿಸಿ) . . . . ಅಥವಾ ಹೇಗೆತಾನೆ ಸೇವಿಸಿಯೇನು? (ಆಲೋಚಿಸುತ್ತ) . . . . . ಹೇಗಾದರಾಗಲಿ. ನನ್ನ ಮನೋವಾಕ್ಕಾಯಗಳು ನಿನಗೆ ಮೀಸಲಾದುವು. ನಾನು ಓದಿದ ಓದು ನಿನಗೆ ಮೀಸಲಾದುದು. ನನ್ನ ಸಕಲ ಸಂಪತ್ತೂ—ಅದೇನಿದ್ದರೂ—ನಿನ್ನ ಪಾದಕ್ಕೆ ಕಾಣಿಕೆಯಾದುದು . . . . ಭುವನೇಶ್ವರಿ, ತಿಳಿದೆನು; ನಿನ್ನ ಚಿತ್ತವನ್ನು ತಿಳಿದೆನು. ಕಲಿವಿಭವವನ್ನು ಸಹಿಸಲಾರದ ಧರ್ಮಮಾತೃಕೆಯಲ್ಲವೆ ನೀನು? . . . ಮ್ಲೇಚ್ಛ ಕಿರಾತರಿಂದ ಪೀಡಿತಳಾದ ದೇಶಲಕ್ಷ್ಮಿಯಲ್ಲವೆ ನೀನು? . . . . . ಅಧೀರರಲ್ಲಿ ನಿಲ್ಲಲಾರದೆ, ಅನಾರ್ಯರನ್ನು ಸಹಿಸಲಾರದೆ, ಕಳವಳಗೊಂಡಿರುವ ರಾಷ್ಟ್ರದೇವತೆಯಲ್ಲವೆ ನೀನು? . . . . ತಾಯೆ, ಕರುಣಿಸು; ನಿನ್ನ ಊಳಿಗಕ್ಕೆ ಬೇಕಾದ ಶಕ್ತಿ ಸಾಹಸಗಳನ್ನನುಗ್ರಹಿಸು. ಧರ್ಮ ಸಂಸ್ಥಾಪನೆಯನ್ನೂ ಆರ್ಯ ಲೋಕೋದ್ಧಾರವನ್ನೂ ಮಾಡುವ ಮಾರ್ಗವನ್ನು ತೋರಿಸು. ನಿನ್ನಾಜ್ಞೆಗಿಂತ ಮೇಲಾದ ಕರ್ತವ್ಯವೆಲ್ಲಿರುವುದು? . . . . ಇನ್ನು ಈ ಸಣ್ಣ ಸಂಸಾರದ ಚಿಂತೆ ಸಾಯಣನಿಗಿರಲಿ; ಲೋಕ ಸಂಸಾರದ ಚಿಂತೆ ನನಗಿರಲಿ . . . ಅವನು ವಿವೇಕಿ; ವಿದ್ಯಾವಂತ; ವಿನಯಶಾಲಿ. ಈ ಕುಟುಂಬದ ಭಾರವನ್ನು ಅವನು ವಹಿಸಲಿ; ಜಗತ್ತೆಲ್ಲವೂ ನನ್ನ ಕುಟುಂಬವಾಗಿರಲಿ . . . (ಆಕಾಶದ ಕಡೆ ನೋಡಿ) ಇನ್ನೇನು ಬೆಳಕು ಹರಿಯುವ

ಹೊತ್ತು ಸಮಿಾಪಿಸಿತು. ಸಾಯಣನನ್ನೆಬ್ಬಿಸಿ ಅವನಿಗೆ ಈ ಅದ್ಭುತ ವನ್ನು ವಿವರಿಸಬೇಕು. ಪಾಪ! ನನ್ನ ಈ ಸಂಕಲ್ಪದಿಂದ ಅವನಿಗೆ ಸ್ವಲ್ಪ ಕಳವಳವುಂಟಾಗಬಹುದು. ಆದರಾಗಲಿ; ಅಭ್ಯಾಸದಿಂದ ಎಲ್ಲವೂ ಸರಿ ಹೋಗುವುದು. . . . ಹಾಗೆಯೇ ಹರಿಹರನಿಗೂ ಇದನ್ನು ಸೂಕ್ಷ್ಮ ವಾಗಿ ಹೇಳಬೇಕಲ್ಲವೆ? ಅವನೊಬ್ಬನೇ ನಮಗಿರುವ ಆಪ್ತನು. ಪಾಪ! ತನಗಿರುವ ರಿಕ್ತದಶೆಯಲ್ಲಿಯೂ ಅವನು ನಮ್ಮ ಕೈಬಿಡದೆ ಎಷ್ಟೋ ಉಪ ಕಾರಿಯಾಗಿದ್ದಾನೆ. ಅವನಿಲ್ಲದಿದ್ದರೆ ನಾವು ಎಂದೋ ದೇಶಾಂತರಕ್ಕೆ ಹೋಗಬೇಕಾಗುತ್ತಿತ್ತು. ಅಂತಹವನಿಗೆ ಹೇಳದೆ ನಾನು ಹೋಗ ಬಹುದೆ? . . . . ಇಲ್ಲಿಂದ ಕಂಚಿಗೆ ಒಂದು ವಾರದ ಪ್ರಯಾಣ. ಅಲ್ಲಿ ಸೇರಿದ ಬಳಿಕ ಮುಂದಿನ ಯೋಚನೆ. ವಿದ್ಯಾತೀರ್ಥ ಗುರು ಗಳನ್ನು ನೋಡಿದಲ್ಲದೆ ಹೇಗೆ ನಡೆಯುವುದಕ್ಕೂ ತೋರುವುದಿಲ್ಲ. . . . . . ತಾಯಿ, ಶ್ರೀಮತಿ, ಭುವನೇಶ್ವರಿ, ವೇದಮಾತೆ, ಸತ್ತ್ವ ಶುದ್ಧಿಯನ್ನು ಕೊಡು; ಚಿತ್ತಸ್ಥೈರ್ಯವನ್ನು ಕೊಡು.

[ತೆರೆ ಬೀಳುವುದು.

---

## ದೃಶ್ಯ ೨

[ಸ್ಥಳ: ಮಾಧವಭಟ್ಟರ ಮನೆ; ವೇಳೆ: ಸಾಯಂಕಾಲ. ಸಾಯಣ ಭಟ್ಟರು ಮುಖ ಬಾಡಿದವರಾಗಿ, ಚಿಂತೆಯಲ್ಲಿ ಕುಳಿತಿರುವರು.]

**ಸಾಯಣ—** . . . . ವಿಚಾರಮಾಡಿ ನೋಡಿದರೆ ವಿಷಾದಕ್ಕೆ ಯಾವ ಕಾರಣವೂ ತೋರುವುದಿಲ್ಲ; ಎಲ್ಲವೂ ಶುಭ ಸೂಚನೆಯೆಂದೇ ತೋರುತ್ತದೆ. ಆದರೆ ಹೊಟ್ಟೆಯಲ್ಲಿ ಮಾತ್ರ ಏನೋ ಸಂಕಟ. ಎಷ್ಟೋ ಬಗೆಯಾಗಿ ಧೈರ್ಯ ಹೇಳಿದ್ದಾರೆ. ಆದರೂ ಏಕೋ ಎದೆ ಡವಡವನೆ ಬಡಿದುಕೊಳ್ಳುತ್ತಿದೆ . . . . . ನಡೆದ ಕಥೆಯನ್ನು ನೆನೆಸಿಕೊಂಡರೆ ರೋಮಾಂಚವಾಗುತ್ತದೆ. ಆದರೂ ಮನಸ್ಸಿನ ತಲ್ಲಣಿಕೆ ಮಾತ್ರ ಏನು ಮಾಡಿದರೂ ನಿಲ್ಲದು. ಯಾರಿಗೆ ಹೇಳಲಿ? ಯಾರನ್ನು ಹುಡುಕಿಕೊಂಡು ಹೋಗಲಿ? ಈ ವಿಷಮ ಕಾಲದಲ್ಲಿ ಯಾರು ನನ್ನನ್ನು ಆದರಿಸುವರು? . . . .

[ಹರಿಹರನು ಪ್ರವೇಶಿಸುವನು.]

**ಹರಿಹರ**—ಚಿಕ್ಕ ಗುರುಗಳೆ, ನಮಸ್ಕಾರ ತೆಗೆದುಕೊಳ್ಳಬೇಕು.

**ಸಾಯಣ**—ಬಾ, ಹರಿಯಪ್ಪಾ. ಒಳ್ಳೆಯ ಸಮಯಕ್ಕೆ ಬಂದೆ.

**ಹರಿಹರ**—(ಪ್ರಣಾಮ ಮಾಡಿ ಎದ್ದು ಕುಳಿತು) ಬೆಳಗಾಗ ದೊಡ್ಡ ಗುರುಗಳವರು ಪ್ರಯಾಣ ಹೊರಡುವುದಕ್ಕೆ ಮುಂಚೆ ನನಗೆ ದರ್ಶನ ಕೊಟ್ಟು, ಇದುವರೆಗೂ ನಾನು ಅವರನ್ನು ಕಾಣುತ್ತಿದ್ದಂತೆ ಇನ್ನು ಮುಂದೆ ತಮ್ಮನ್ನು ಕಾಣಬೇಕೆಂದು ಹೇಳಿ, ಆಶೀರ್ವಾದವಿತ್ತು ತೆರಳಿದರು. ಅದರಂತೆ ತಮ್ಮನ್ನು ನೋಡಿ ಹೋಗೋಣವೆಂದು ಬಂದೆ. ದೇವರು ನನಗೆ ಇತರ ಭಾಗ್ಯಗಳನ್ನು ತಪ್ಪಿಸಿದ್ದರೂ ತಮ್ಮಿಬ್ಬರ ವಿಶ್ವಾಸವನ್ನು ಮಾತ್ರ ಉಳಿಸಿಕೊಟ್ಟಿದ್ದಾನೆ. ನನ್ನ ಸ್ಥಿತಿಯನ್ನು ನೋಡಿಕೊಂಡರೆ ನನ್ನಿಂದ ಯಾರಿಗಾದರೂ, ಎಂದಿಗಾದರೂ, ಎಳ್ಳಷ್ಟಾದರೂ ಉಪಯೋಗವಾದೀತೆಂದು ಅಂದುಕೊಳ್ಳುವುದಕ್ಕೆ ಧೈರ್ಯವಿಲ್ಲ. ಆದರೂ ತಮ್ಮ ಕಷ್ಟಸುಖಗಳಿಗೆ ಬಾಧ್ಯನಾದವನು ನಾನೂ ಒಬ್ಬನೆಂದು ತಾವು ಎಣಿಸಿ, ನನ್ನನ್ನು ತಮ್ಮ ಆಪ್ತವರ್ಗದಲ್ಲಿ ಸೇರಿಸಿಕೊಳ್ಳಬೇಕು. ಇವನು ಯಾರೋ ಹೊರಗಿನವನೆಂದು ಬಿಡಕೂಡದು. ಇದು ಬಾಯಿಂದ ಮಾತ್ರ ಬರುವ ಮಾತಲ್ಲ. ಮನಸ್ಸಿನ ಮಾತು.

**ಸಾಯಣ**—ಹರಿಯಣ್ಣಾ, ನಿನ್ನ ಸ್ನೇಹದ ವಿಷಯದಲ್ಲಿ ನನಗೆ ಯಾವಾಗಲೂ ಶಂಕೆಯಿರಲಿಲ್ಲವಲ್ಲ! ಈಗಲೂ ನಿನ್ನನ್ನೇ ನೆನೆಯುತ್ತಿದ್ದೆ. ಈ ಆಪತ್ಕಾಲದಲ್ಲಿ ಮಿತ್ರಸಂಪತ್ತಿಗಿಂತಲೂ ದೊಡ್ಡದಾವುದು?

**ಹರಿ**—ಗುರುವೆ, ತಾವು ಇದುವರೆಗೂ ಎಂದೂ ಅಣ್ಣಂದಿರನ್ನು ಬಿಟ್ಟಿದ್ದುದಿಲ್ಲ, ಅಲ್ಲವೆ?

**ಸಾಯಣ**—ಎಂದೂ ಇಲ್ಲ, ಹರಿಯಪ್ಪ; ನನಗೆ ತಂದೆಯಿಲ್ಲವೆಂದು ತೋರಿರುವುದು ಈ ಹೊತ್ತೇ.

**ಹರಿ**—ಅದೆಂತಹ ಪ್ರೀತಿ ಅವರದು! . . . . ಎಷ್ಟೇ ಕಷ್ಟ ಬಂದರೂ ನಾವಿಬ್ಬರೂ ಒಬ್ಬರನ್ನೊಬ್ಬರು ಕೈ ಬಿಡಕೂಡದೆಂದು ಸಾರಿ ಸಾರಿ ಹೇಳಿದರು.

**ಸಾಯಣ**—ನನಗೂ ಹಾಗೆಯೇ ಹೇಳಿದರು. ನಿನ್ನನ್ನು ಬಿಟ್ಟರೆ ನನಗಿರುವ ಆಪ್ತನಾರು?

**ಹರಿ**—ನಿಮ್ಮನ್ನು ಬಿಟ್ಟರೆ ನನಗಿರುವ ಹಿತಕರ್ತರಾರು?

**ಸಾಯಣ**—ಹರಿಯಪ್ಪಾ, ತಮ್ಮಂದಿರೆಲ್ಲರೂ ಸೌಖ್ಯದಲ್ಲಿರುವರೆ?

**ಹರಿ**—ನಿಮ್ಮ ಆಶೀರ್ವಾದ ಬಲದಿಂದ ಇದುವರೆಗೂ ಎಲ್ಲರೂ ಕ್ಷೇಮ. . . . ಪಾಪ! ಅವರು ಬಹಳ ಒಳ್ಳೆಯ ಹುಡುಗರು; ಧೈರ್ಯವಂತರು, ಸಮರ್ಥರು. ಆದರೆ ನನ್ನ ಅದೃಷ್ಟವು ಪ್ರತಿಕೂಲವಾಗಿರುವಾಗ ಅವರೇನು ಮಾಡಿಯಾರು? ಈಗ ಹೇಗೆಂದರೆ ಹಾಗೆ ಕಾಲವನ್ನು ತಳ್ಳಬೇಕಾಗಿದೆ.

**ಸಾಯಣ**—ಸದ್ಯಕ್ಕೆ ದೊಡ್ಡ ಭಯವೇನೂ ಇಲ್ಲವಷ್ಟೆ?

**ಹರಿ**—ಹೇಳುವುದು ಹೇಗೆ? ದೆಹಲಿಯ ಕಡೆಯಿಂದ ದೊಡ್ಡ ಪಡೆಯೊಂದು ಹೊರಟಿದೆಯೆಂದು ಅಂದುಕೊಳ್ಳುತ್ತಾರೆ. ನಮ್ಮ ಮಹಾರಾಜರೇನೋ ಕೋಟೆ ಕೊತ್ತಲಗಳನ್ನು ಭದ್ರಪಡಿಸುತ್ತಿದ್ದಾರೆ. ಮುಂದೆ ಹೇಗಾಗುವುದೋ ನೋಡಬೇಕು.

**ಸಾಯಣ**—ಆತನ ಪಾಳೆಯಗಾರರೆಲ್ಲ ಆತನಿಗೆ ಸಹಾಯವಾಗಿರುವರಷ್ಟೆ?

**ಹರಿ**—ಅದು ಸಂದೇಹದ ಮಾತು. ಈಗ ಸಹಾಯವಾಗುವಂತೆಯೇ ಇರುತ್ತಾರೆ. ಶತ್ರುಗಳು ಬಂದಮೇಲೆ ಅವರೊಡನೆ ಸೇರಿಕೊಂಡರೆ ಮಾಡುವುದೇನು? ಬಲಿಷ್ಠರೊಡನೆ ಸೇರಿಕೊಂಡರೆ ಅವರ ಜಯದಲ್ಲಿ ಭಾಗ ದೊರೆತೀತೆಂಬ ಆಸೆ; ಅದಿಲ್ಲದಿದ್ದರೂ ತಮ್ಮ ಉಳಿವಿಗೆ ಭಯವಿಲ್ಲವೆಂಬ ಭ್ರಾಂತಿ.

**ಸಾಯಣ**—ಲೋಕದ ರೀತಿಯೇ ಹಾಗೆ . . . . ಹರಿಯಪ್ಪಾ, ಯಾರು ಹೇಗಾದರೂ ಹೋಗಲಿ. ನೀವು ಮಾತ್ರ ಅಂತಹ ಆಸೆಗೆ ಒಳಗಾಗಬೇಡಿ.

**ಹರಿ**—ಬೆಳಿಗ್ಗೆ ಮಾಧವ ಗುರುಗಳೂ ಹಾಗೆಯೇ ಎಚ್ಚರ ಕೊಟ್ಟರು. ಇಷ್ಟಕ್ಕೂ ನನಗಿರುವ ಶಕ್ತಿ ಸಂಪತ್ತುಗಳೇನು? ನನ್ನ ತಮ್ಮಂದಿರಿಗೇನೋ ಹೊಸದಾಗಿ ಒಂದು ಪಾಳೆಯವನ್ನಾದರೂ ಕಟ್ಟಿ ಕೊಳ್ಳಬೇಕೆಂದು ಆಶೆಯುಂಟು. ಅದರಲ್ಲಿಯೂ ಬುಕ್ಕಣ್ಣನಿಗೆ ಸ್ವಾಭಾವಿಕವಾಗಿ ಉತ್ಸಾಹ ಹೆಚ್ಚು. ಉತ್ತರದೇಶದಿಂದ ತುರುಕರು ಒಂದು ರಾಜ್ಯಗಳನ್ನೊಡೆಯುವಾಗ ನಮಗೇನಾದರೂ ತಲೆಯೆತ್ತುವುದಕ್ಕೆ ಅವಕಾಶ ದೊರೆತೀತೇನೋ ಎಂದು ಅವನಿಗೆ ಒಂದು ವೇಳೆ ಆಶೆಯಿದ್ದರೂ ಇರಬಹುದು. ಆದರೂ ಗುರುಗಳ ಮಾತನ್ನು ನಾವು ಯಾರೂ ಮೀರತಕ್ಕವರಲ್ಲ. ಆನೆಗೊಂದಿಯ ರಾಯರ ಆಶ್ರಯವನ್ನು ನಾವು ಈಗ ಬಿಡಕೂಡದೆಂದೂ, ಉತ್ತರೋತ್ತರ ಸ್ಥಿತಿಗತಿಗಳನ್ನು ನೋಡಿ ಆಲೋಚನೆ ಮಾಡಿಕೊಳ್ಳಬೇಕೆಂದೂ ಅವರು ಹೇಳಿರುವರು.

**ಸಾಯಣ**—ಹರಿಯಣ್ಣಾ, ಯಾವ ಕಾಲಕ್ಕೆ ಯಾರಿಂದ ಯಾವ ಕೆಲಸ ನಡೆಯಬೇಕಾಗಿರುವುದೋ ನಾವರಿಯಲಾರೆವು. ಕಾಲ ದೇಶ ಸನ್ನಿವೇಶಗಳನ್ನು ನೋಡಿ ನೀತಿಯರಿತು ನಡೆಯಬೇಕೇ ಹೊರತು ದುಡುಕಿ ವಿಪರೀತ ಪ್ರಯತ್ನಕ್ಕೆ ಕೈ ಹಾಕಬಾರದು.

**ಹರಿ**—ಈ ಬುದ್ಧಿಯ ಮಾತನ್ನು ನಾನು ಆಗಾಗ ನಮ್ಮ ಹುಡುಗರಿಗೆ ಹೇಳುತ್ತಿರುವೆನು. ಅವರು ಸಾಹಸ ಪ್ರಿಯರಾದರೂ ನನ್ನ ಮಾತಿಗೆ ಎದುರು ಹೇಳುವವರಲ್ಲ.

**ಸಾಯಣ**—ಅದೂ ಒಂದು ಭಾಗ್ಯವೇ. ಭೀಮಾರ್ಜುನರು ವಿಧೇಯರಾಗಿದ್ದುದು ಧರ್ಮರಾಯನ ಭಾಗ್ಯವಲ್ಲವೆ?

**ಹರಿ**—. . . . ಸಾಯಣ ಗುರುವೆ, ದೊಡ್ಡಗುರುಗಳ ಇಷ್ಟ ಇನ್ನೊಂದಿದೆ. ತಾವು ಗೃಹಸ್ಥಾಶ್ರಮವನ್ನು ಪಡೆಯಲು ನನ್ನಿಂದಾಗಬಲ್ಲ ಸಹಾಯವನ್ನೆಲ್ಲ ಕೊಡಬೇಕೆಂದು ಆಜ್ಞಾಪಿಸಿರುವರು. ಆ ಆಜ್ಞೆಯನ್ನು ಶಿರಸಾವಹಿಸಿರುವೆನು.

**ಸಾಯಣ**— . . . . ಹರಿಯಪ್ಪಾ, ಆ ಚಿಂತೆ ಈಗ ನನಗಿಲ್ಲ. ಪೂಜ್ಯರಾದ ಅವರು ದೇಶ ವಿದೇಶಗಳಲ್ಲಿ ಅಲೆಯುತ್ತಿರುವಾಗ ನನಗೆ ವಿವಾಹೋತ್ಸವದ ಚಿಂತೆಯೆ?

**ಹರಿ**—ಗುರುಗಳೆ, ವಿದ್ವಾಂಸರೂ ಪರಿಶುದ್ಧರೂ ಆದ ತಮಗೆ ನಾನು ಯಾವ ಸಮಾಧಾನವನ್ನು ಹೇಳಬಹುದು? ಆದರೆ ಮಾಧವ ಗುರುಗಳು ಭಗವಂತನ ಪ್ರೇರಣೆಯಿಂದ ಯಾತ್ರೆ ಬೆಳೆಸಿರುವರು; ಮಹಾತ್ಮರ ದರ್ಶನಕ್ಕೆಂದು ಹೊರಟಿರುವರು; ಮಹಾಕಾರ್ಯದ ದೀಕ್ಷೆಯನ್ನು ವಹಿಸಿಕೊಂಡಿರುವರು. ಅದು ಸಂತೋಷಕ್ಕೆ ಕಾರಣ ವಲ್ಲವೆ?

**ಸಾಯಣ**—ಅದು ಪರಮ ಸಂತೋಷದ ವಿಷಯವೇ . . . . ನನ್ನ ಬುದ್ಧಿಯೂ ಹಾಗೆಯೇ ಹೇಳುತ್ತದೆ. ಆದರೂ ಮನಸ್ಸೊಪ್ಪದು. ಬೆಳಗಾಗಿನಿಂದ ಯಾವ ಕಡೆ ನೋಡಿದರೂ ನನ್ನ ಕಣ್ಣಿಗೆ ಪ್ರಪಂಚವು ಬರಿಯದಾಗಿರುವಂತೆ ತೋರುತ್ತಿದೆ. ಏನು ಮಾಡಲಿ! . . . . ಅವರು ಕಂಚಿಯನ್ನು ಸೇರಿ ವಿದ್ಯಾತೀರ್ಥ ಗುರು ದರ್ಶನವನ್ನು ಮಾಡಿದ ಸಮಾಚಾರ ಬರುವವರೆಗೂ ಈ ತಲ್ಲಣಿಕೆ ಹೋಗುವುದಿಲ್ಲ.

**ಹರಿ**—ಅವರಿಗೂ ಮನಸ್ಸು ಕಳವಳಗೊಂಡಿತ್ತೆಂಬುದು ಬೆಳಿಗ್ಗೆ ಅವರ ಧ್ವನಿಯಿಂದಲೇ ತೋರುತ್ತಿತ್ತು. . . . ಎಷ್ಟೋ ಮಮತೆ ಯನ್ನಿಟ್ಟುಕೊಂಡಿದ್ದರು! . . . . ತಮ್ಮ ವಿವಾಹದ ವಿಷಯದಲ್ಲಿ ಬಹುವಾಗಿ ಆತುರವನ್ನು ತೋರಿದರು.

**ಸಾಯಣ**—ಅದನ್ನು ನಾನೂ ಬಲ್ಲೆ . . . . ಆದರೂ ಈಗ ಅದಕ್ಕಾಗಿ ನಾನು ಪ್ರಯತ್ನಪಡತಕ್ಕವನಲ್ಲ. ದೇವರ ಚಿತ್ತ ಹೇಗಿದ್ದರೆ ಹಾಗೆ ಆಗುವುದು.

**ಹರಿ**—ಇದು ತಮ್ಮೊಬ್ಬರ ಇಷ್ಟಕ್ಕೆ ಮಾತ್ರ ಸೇರಿದ ಮಾತಲ್ಲ; ದೊಡ್ಡವರ ಇಷ್ಟದ ಮಾತು. ಅದನ್ನು ಇಷ್ಟದಿಂದ ನಡೆಸಬೇಕಲ್ಲವೆ?

**ಸಾಯಣ**—ಇರಲಿ, ಹರಿಯಪ್ಪಾ, ಈಗೇನು ಅದಕ್ಕೆ ಅವಸರ? ತಕ್ಕ ಸಮಯ ಬಂದಾಗ ನಿನಗಲ್ಲದೆ ಮತ್ತಾರಿಗೆ ತಿಳಿಸಲಿ?

**ಹರಿ**—ಆದಾಗಬಹುದು. ಹಾಗಾದರೆ ನಾನು ಇನ್ನೊಂದು ವೇಳೆ ಬಂದು ದರ್ಶನ ತೆಗೆದುಕೊಳ್ಳುವೆನು. ಈಗ ಆಶೀರ್ವಾದ ಕೊಟ್ಟರೆ ಹೋಗಿಬರುವೆನು.

**ಸಾಯಣ**—ಹರಿಯಣ್ಣಾ, ನಾನೇನು ನಿನಗೆ ಹೆಚ್ಚಾಗಿ ಹೇಳಿ ಕೊಳ್ಳಬೇಕಾಗಿಲ್ಲ . . . . ಆಗಾಗ ಬಂದು ವಿಚಾರಿಸಿಕೊಂಡು ಹೋಗುತ್ತಿರು.

[**ಹರಿಹರನು ನಮಸ್ಕರಿಸುವನು.**

ದೇವರ ಕೃಪೆಯು ನಿನ್ನಲ್ಲಿ ಸಂಪೂರ್ಣವಾಗಿರುವುದು.

[**ತೆರೆ ಬೀಳುವುದು.**

---

## ದೃಶ್ಯ ೩

[**ಸ್ಥಳ : ಶ್ರೀರಂಗಕ್ಷೇತ್ರ. ಶ್ರೀವೈಷ್ಣವ ಗೋಷ್ಠಿ. ಹರಿಭಜನೆ—ಹಾಡು.**]

**ಶ್ರೀವೈಷ್ಣವ ಭಕ್ತರು**—ರಂಗೇಶಕಾಯೊ ರಂಗೇಶಕಾಯೊ
ರಂಗೇಶಬಂದೆವ್ಮು ರಂಗೇಶಕಾಯೊ ॥ ಪ ॥

ಕಾರುಣ್ಯಸಿಂಧು ಕಲಿಭೀತಿಯಿಂದು–
ದ್ಧರಿಸಬೇಕೆವ್ಮನು ಜಗದೇಕಬಂಧು ॥ ೧ ॥

ದುರಿತವಿದೂರ ದೈತ್ಯವಿದಾರ
ಧರ್ಮವ ಸಲಹಯ್ಯ ದೀನಮಂದಾರ ॥ ೨ ॥

ಶ್ರೀರಂಗರಾಜ ಶ್ರಿತಕಲ್ಪಭೂಜ
ನಿನ್ನ ನಂಬಿಹೆವಯ್ಯ ರವಿಕೋಟಿ ತೇಜ ॥ ೩ ॥

[**ಪ್ರವೇಶ: ಪರಾಂಕುಶಭಟ್ಟ.**]

**ಪರಾಂ**—ಚೆನ್ನಾಯಿತು, ಚೆನ್ನಾಯಿತು! ಇಲ್ಲಿ ಕೂತು ರಾಗ ಸೆಳೆಯುತ್ತಿದ್ದರೆ ತುರುಷ್ಕರನ್ನೋಡಿಸಿದ ಹಾಗೆಯೇ ಆಯಿತು!

**೧ನೆಯ ಶ್ರೀವೈಷ್ಣವ**—ಇಲ್ಲ ಇಲ್ಲ, ಹರಿಭಜನೆಯನ್ನು ಬಿಟ್ಟು ಹಾರಾಡುತ್ತಿದ್ದರೆ ತುರುಷ್ಕರು ಓಡಿಯೇ ಹೋಗುವರಲ್ಲವೆ?

**ಪರಾಂ**—ನಾನು ಹಾರಾಡದಿದ್ದರೆ ನಿವ್ಮನ್ನು ಈ ಮಂಕು ದಿಣ್ಣೆಯಿಂದ ಎಬ್ಬಿಸುವರಾರು?

**೨ನೆಯ ಶ್ರೀವೈ**—ನಮಗೆ ಈ ಮಂಕು ದಿಣ್ಣೆಯೇ ಇರಲಿ, ನೀವು ರಣರಂಗದಲ್ಲಿ ಹೇಗೆ ವಿಜೃಂಭಿಸುವಿರೋ ನೋಡೋಣ.

**ಪರಾಂ**—ಹಾಗಾದರೆ ನೀವು ಅಲ್ಲಿಗೆ ಬರತಕ್ಕವರಲ್ಲವೊ?

**೧ನೆಯ ಶ್ರೀವೈ**—ಈ ಬಡದಾಸರು ಅಲ್ಲಿ ಮಾಡತಕ್ಕುದೇನು?

**ಪರಾಂ**—ಹಾಗೆಂದರೇನು? ದೇವರು ನಿಮಗೆ ಗಂಟಲೊಂದನ್ನೇನೋ ಕೊಟ್ಟಿರುವುದು? ಕೈ ಕಾಲುಗಳನ್ನು ಕೊಟ್ಟಿಲ್ಲವೊ?

**೨ನೆಯ ಶ್ರೀವೈ**—ಕೈಕಾಲುಗಳ ಪ್ರತಾಪದಲ್ಲಿ ನಾವು ತೆಂಕಲೆ ಸ್ವಾಮಿಗಳಿಗೆ ಎಂದು ಸಮನಾದೇವು?

**೩ನೆಯ ಶ್ರೀವೈ**—ಅಯ್ಯಾ, ಅದೇಕೆ ಹಾಗೆ ಹೇಳುವೆ? ಒಬ್ಬರನ್ನೊಬ್ಬರು ಮೂದಲಿಸಬಹುದಾದ ಕಾಲವೆ ಇದು? ನಮ್ಮ ಒಳಜಗಳಗಳನ್ನು ಮರೆಯದಿದ್ದರೆ ಹೊರಗಿನವರಿಂದ ಹಾಳಾಗುವುದು ಖಂಡಿತ.

**೧ನೆಯ ಶ್ರೀವೈ**—ಏನಯ್ಯಾ, ಹಾಗಾದರೆ ತುರುಷ್ಕರು ನಿಜವಾಗಿಯೂ ಶ್ರೀರಂಗಕ್ಕೆ ಬರುವರೆನ್ನುವೆಯಾ?

**ಪರಾಂ**—ಅಯ್ಯೋ ಹುಚ್ಚಪ್ಪಾ, ಇನ್ನೂ ಸಂದೇಹವೆ? ಮೂರ್ತೀಭವಿಸಿದ ಪಾಪಗಳೋ ಎನ್ನುವಂತೆ ಅವರು ದಂಡುಕಟ್ಟಿಕೊಂಡು ಬರುತ್ತಿದಾರಲ್ಲಾ!

**೨ನೆಯ ಶ್ರೀವೈ**—ಆ ಹಾಳು ಪಾಪಿಷ್ಠರಿಗೆ ಯಾರಾದರೂ ರಂಗನಾಥ ಮಾಹಾತ್ಮ್ಯವನ್ನು ಓದಿಹೇಳಬಾರದೆ? ಅವರಿಲ್ಲಿ ಕಾಲಿಟ್ಟರೆ ಅವರ ಕಾಲುಗಳೇ ಕುಸಿದುಬೀಳಲಾರವೆ? ಅವರ ಕಣ್ಣುಗಳೇ ಇಂಗಿಹೋಗಲಾರವೆ? ಅವರ ಕೈಗಳೇ ಕಟ್ಟಿಗೆಯಾಗಲಾರವೆ? ಶ್ರೀವೈಷ್ಣವ ರಕ್ತದ ಬಿಂದು ಒಂದು ನೆಲಕ್ಕೆ ಬಿದ್ದರೆ ಆ ಹಾಳು ತುರುಷ್ಕರ ವಂಶವೆಲ್ಲವೂ ನಿರ್ಮೂಲವಾಗುವುದಲ್ಲಾ!

**ಪರಾಂ**—ಈ ಒಣ ಹರಟೆಯೆಲ್ಲಾ ನಿಲ್ಲುವ ಸಮಯವು ಹತ್ತಿರದಲ್ಲಿಯೇ ಇದೆ. ತುರುಷ್ಕರು ಬರುವುದು ರಂಗನಾಥ ಮಾಹಾತ್ಮ್ಯವನ್ನು ಕೇಳುವುದಕ್ಕಲ್ಲ; ನಿಮ್ಮ ನಮ್ಮ ಮಾಹಾತ್ಮ್ಯವನ್ನು ನೋಡುವುದಕ್ಕೆ.

ನಿಮ್ಮ ಕ್ಷೇತ್ರ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿಯೇ ವಿಧಿಯು ಅವರನ್ನಿಲ್ಲಿಗೆ ಕಳುಹಿಸುತ್ತಿದೆ.

**೧ನೆಯ ಶ್ರೀವೈ**—ವಿಧಿಗೇನು ಕುರುಡೋ? ಅದು ನಮ್ಮ ಶ್ರೀ ವೈಷ್ಣವ ಚಿಹ್ನೆಗಳನ್ನು ನೋಡಲಾರದೋ? ಅದಕ್ಕೇನು ಕಿವುಡೋ? ಅದು ನಮ್ಮ ಕೀರ್ತನೆ ಪಾರಾಯಣಗಳನ್ನು ಕೇಳಲಾರದೋ?

**ಪರಾಂ**—ಆಹಾ, ದೇವಸ್ಥಾನದಲ್ಲಿ ನೈವೇದ್ಯ ದೀಪಾರಾಧನೆಗಳು ಸಾಂಗವಾಗಿ ನಡೆಯುತ್ತಿದ್ದರೆ ಶ್ರೀವೈಷ್ಣವ ದೀಕ್ಷೆಗೂ ಮಂತ್ರ ಕೀರ್ತನೆಗಳಿಗೂ ಕಡಿಮೆಯೇನು? ನಾಳೆ ಅವರು ಬಂದು ದೇವಾಲಯಗಳನ್ನೊಡೆದು, ದೇವಮೂರ್ತಿಗಳನ್ನು ಒಡಿದು, ಗ್ರಂಥರಾಶಿಗೆ ಬೆಂಕಿಯಿಟ್ಟು, ಶಿಖಾ ಯಜ್ಞೋಪವೀತಗಳನ್ನು ಕಿತ್ತುಹಾಕಿದಾಗಲಲ್ಲವೆ ನಿಮ್ಮ ಭಕ್ತಿ ಪ್ರಭಾವವು ಬೆಳಗುವುದು?

**೨ನೆಯ ಶ್ರೀವೈ**—ಏನು ಪರಾಂಕುಶ ಭಟ್ಟರೆ, ನೀವು ಹೆದರಿಸುವಷ್ಟು ಜಾಣರಾದರೆ ನಾವು ಅದಿರುವಷ್ಟು ಬೆಪ್ಪರೆಂದು ತಿಳಿದಿರೋ? ಆ ಹುಚ್ಚು ಯವನರು ಇಲ್ಲಿಗೆ ಬಂದು ಯಾವ ಸಂಪತ್ತನ್ನು ಪಡೆದಾರು? ನಮ್ಮ ತುಳಸೀ ಸರಗಳಿಂದಲೂ ನಾಮದ ಬುಟ್ಟಿಗಳಿಂದಲೂ ಓಲೆಯ ಪುಸ್ತಕಗಳಿಂದಲೂ ಅವರಿಗೇನಾಗಬೇಕು? ಅವರಾವುದಾದರೂ ರಾಜಧಾನಿಯನ್ನು ಹುಡುಕಿಕೊಂಡು ಹೋಗಿ ರಾಜನ ಮೇಲೆ ಕೈಮಾಡಿದರೆ ಪ್ರಯೋಜನವಾದೀತು. ಅದು ಬಿಟ್ಟು ಈ ಅಗ್ರಹಾರಕ್ಕೆ ಮುತ್ತಿಗೆಹಾಕಿದರೆ ಅಂಗ ನಷ್ಟವೂ ಆಯುಧ ನಷ್ಟವೂ ಆಗುವುದಲ್ಲದೆ ಬೇರೆ ಲಾಭವಾಗದೆಂಬುದು ಅವರಿಗೆ ತಿಳಿಯದೆ?

**ಪರಾಂ**—ನಿಮಗೆ ಪೊಂಗಲು ಪರಮಾನ್ನಗಳ ವಾಸನೆಯ ವಿನಾ ಯಾವ ವಾಸನೆಯೂ ತಿಳಿಯಲಾರದೆಂದು ತೋರುತ್ತದೆ. ತುರುಷ್ಕರ ಸುದ್ದಿಯೇ ನಿಮಗೆ ತಿಳಿಯದು. ಅಯ್ಯೋ ಮೂರ್ಖರೆ, ಅವರು ಧನ ಲೋಭ ರಾಜ್ಯಲೋಭಗಳಿಂದ ಮಾತ್ರವೇ ಬರತಕ್ಕವರಲ್ಲ. ವೇದ ಶಾಸ್ತ್ರಗಳನ್ನು ನಿರ್ನಾಮ ಮಾಡಬೇಕೆಂಬುದೇ ಅವರ ಪ್ರತಿಜ್ಞೆ. ಇದಕ್ಕಾಗಿ ಅವರು ಎಷ್ಟೋ ಹಳ್ಳಿ ಪಟ್ಟಣಗಳನ್ನು ಕೊಳ್ಳೆಹೊಡೆದು,

ಮಠ ಮಂದಿರಗಳನ್ನು ಧ್ವಂಸಮಾಡಿ, ಸ್ತ್ರೀ ಶಿಶುಗಳನ್ನು ಕೊಂದು, ಜಾತಿ ನೀತಿಗಳನ್ನು ಹಾಳುಮಾಡಿರುವರೆಂದು ನೀವು ಕೇಳಿಲ್ಲವೆ? ಅವರು ಋಷಿ ಮತಕ್ಕೆ ರಾಕ್ಷಸ ಸ್ವರೂಪರು; ಶ್ರುತಿ ಸ್ಮೃತಿಗಳಿಗೆ ಮೃತ್ಯು ಪ್ರಾಯರು. ನಾವು ಅವರಸ್ನೆದಿರಿಸಿ ನಿಂತು, ಧೈರ್ಯದಿಂದ ಕಾದಿ, ದಿವ್ಯದೇಶವನ್ನು ಕಾಪಾಡಿದರೆ ಆಗ ನಮ್ಮ ಭಕ್ತಿ ನಿಜವೆನಿಸುವುದು. ಬಾಯಿಮಾತಿನ ಭಕ್ತಿಯೂ ತಿರುಚೂರ್ಣದ ಭಕ್ತಿಯೂ ಭಕ್ತಿಯೆ?

[ಪ್ರವೇಶ: ಕೇಶವದಾಸ.]

**ಕೇಶವ**—ಏನು ಸ್ವಾಮಿಗಳೆ, ಹಾಡಿದ್ದೂ ಹರಟಿದ್ದೂ ಇನ್ನೂ ಮುಗಿಯಲಿಲ್ಲವೆ? ಬ್ರಹ್ಮೋತ್ಸವದ ಪ್ರಸಾದವು ಮಿಕ್ಕಿರುವವರೆಗೂ ನಿಮಗೆ ಯಾವ ಹೆದರಿಕೆಯೂ ಇರದು.

**೨ನೆಯ ಶ್ರೀವೈ**—ಹಾಗೆ ಹೇಳಕೂಡದು, ಕೇಶವದಾಸರೆ. ನಾವು ಏನು ಮಾಡುವುದಕ್ಕೂ ತೋರದೆ, ರಂಗನಾಥನಲ್ಲಿ ಮೊರೆಯಿಡುತ್ತಿದ್ದೆವು. ಈಗ ಪರಾಂಕುಶ ಭಟ್ಟರು ಒಂದು ಕ್ಷತ್ರಿಯ ಧರ್ಮ ಬೋಧನೆಯನ್ನು ಉಪಕ್ರಮಿಸಿದ್ದಾರೆ.

**ಕೇಶವ**—ಇಂತಹ ಆಪತ್ಕಾಲದಲ್ಲಿ ನಾವು ಕ್ಷತ್ರಿಯ ಧರ್ಮವನ್ನು ಹಿಡಿಯದಿದ್ದರೆ ಯಾವ ಧರ್ಮವೂ ನಿಲ್ಲದು. ಹಿಂದೆ ದ್ರೋಣಾದಿ ಬ್ರಾಹ್ಮಣರು ಶಸ್ತ್ರಧಾರಣೆ ಮಾಡಲಿಲ್ಲವೆ?

**೧ನೆಯ ಶ್ರೀವೈ**—ಏನು ಸ್ವಾಮಿ, ನಾವು ಆಯುಧಪಾಣಿಗಳಾಗಿ ನಿಲ್ಲುವುದಕ್ಕೆ ಮುಂಚೆ ವಾಗಾಯುಧವನ್ನು ಪ್ರಯೋಗಿಸಿ ನೋಡುವುದು ಉಚಿತವಲ್ಲವೆ? ಅದರಿಂದ ನಮಗೆ ಯಾವ ಹಾನಿಯೂ ಇಲ್ಲದೆ ಶತ್ರು ಹಾನಿಯಾಗುವುದು.

**ಕೇಶವ**—ಹಾಗೆಂದರೇನು?

**೧ನೆಯ ಶ್ರೀವೈ**—ತಿಳಿಯದೆ? ವಿಪ್ರವಾಕ್ಯಕ್ಕೇ ಸಕಲವಾದ ನಿಗ್ರಹಾನುಗ್ರಹ ಶಕ್ತಿಗಳೂ ಇರುವುವು. ನಾವೆಲ್ಲರೂ ಸೇರಿ ಒಂದೇ ಮನಸ್ಸಿನಿಂದ ಒಂದೇ ವಾಕ್ಕಿನಲ್ಲಿ ತುರುಷ್ಕರನ್ನು ಶಪಿಸಿಬಿಟ್ಟರೆ,—

**ಕೇಶವ**—ಸಾಕು ಸಾಕು, ನಾವು ವಚನ ಪ್ರಚಂಡರೆಂಬುದು ಯಾರಿಗೆ ತಿಳಿಯದು ? ಅಶಾಶ್ವತವಾದ ದೇಹವನ್ನು ಧರ್ಮಯುದ್ಧದಲ್ಲಿ ಭಗವದರ್ಪಣೆ ಮಾಡಿರೆಂದರೆ ಅದಕ್ಕೆ ತಕ್ಕಷ್ಟು ವೈರಾಗ್ಯ ನಿಮಗಿಲ್ಲ. ಇಲ್ಲಿ ಅಚ್ಚುಕಟ್ಟಾಗಿ ಕುಳಿತು ಪೊಳ್ಳು ಶಾಪಗಳನ್ನು ಕೊಡಿರೆಂದರೆ ಮಾತ್ರ ಬೇಕಾದಷ್ಟು ಧೈರ್ಯ ಬರುವುದಲ್ಲವೆ ?

**೨ನೆಯ ಶ್ರೀವೈ**—ಓಹೋ, ನಾವು ಅಂತಹ ಹೇಡಿಗಳೇನೂ ಅಲ್ಲ. ಬೇಕಾದರೆ ಪರೀಕ್ಷಿಸಿ ನೋಡಬಹುದು.

**ಕೇಶವ**—ಹಾಗಾದರೆ ಏಳಿರಿ; ಎದ್ದು ಇಲ್ಲಿಂದ ಹೊರಟು, ನಿಮ್ಮ ದಾರಾಪುತ್ರರ ರಕ್ಷಣೆಗೆ ತಕ್ಕ ಉಪಾಯಗಳನ್ನು ತೋರಿಸಿ, ಅವರಿಗೆ ಧೈರ್ಯ ಹೇಳಿದ ಬಳಿಕ ವ್ಯೂಹರೀತಿಯಿಂದ ಸಪ್ತಪ್ರಾಕಾರಗಳನ್ನೂ ಆವರಿಸಿ ನಿಲ್ಲಿರಿ; ನೋಡೋಣ.

**೩ನೆಯ ಶ್ರೀವೈ**—ಶತ್ರು ಸೈನ್ಯವು ಇನ್ನೂ ಎಷ್ಟು ದೂರದಲ್ಲಿದೆ ?

**ಕೇಶವ**—ವಾಯುವೇಗದಿಂದ ಈ ಕಡೆ ಬರುತ್ತಿದೆ; ರಾತ್ರಿಯೆಲ್ಲ ನಡೆದು ಸೂರ್ಯೋದಯದ ವೇಳೆಗೆ ನಮ್ಮ ಕಣ್ಣೆದಿರಿಗೇ ಇರಬಹುದು.

**೧ನೆಯ ಶ್ರೀವೈ**—ಹಾಗಾದರೆ ಅವರು ನಿಶಾಚರರೇ ಸರಿ!

**ಕೇಶವ**—ಪರಾಂಕುಶಭಟ್ಟರೆ, ನಾವಿನ್ನು ಹೊರಡೋಣವೆ ?

**ಪರಾಂ**—ದೇವರ ಉತ್ಸವವು ಇನ್ನೂ ರಂಗಮಂಟಪದಲ್ಲಿಯೇ ಇರಬಹುದಲ್ಲವೆ ? ನಾನು ಅಲ್ಲಿಗೆ ಹೋಗಿ ಬೇಗನೆ ಹಿಂದಿರುಗಬೇಕೆಂದು ಸರ್ವಾಧಿಕಾರಿಗೆ ತಿಳುಹಿಸಿ ಬರುವೆನು.

**ಕೇಶವ**—ನಾನು ಈಗ ಇಲ್ಲಿಗೆ ಬಂದುದು ಅಲ್ಲಿಂದಲೇ ತಾನೆ. ಶತ್ರು ಸಮಾಚಾರವೆಲ್ಲವೂ ಆತನಿಗೆ ಕ್ಷಣೇಕ್ಷಣೇ ಗೂಢಚಾರರಿಂದ ತಿಳಿಯುತ್ತಿದೆ.

**ಪರಾಂ**—ಹಾಗಾದರೆ ದೇವಮೂರ್ತಿಗಳ ರಕ್ಷಣೆ ಹೇಗೆ ?

**ಕೇಶವ**—ಉತ್ಸವ ಮೂರ್ತಿಗಳನ್ನು ಪೆಟ್ಟಿಗೆಯಲ್ಲಿ ಭದ್ರಪಡಿಸಿ, ಕಾವೇರೀ ತೀರದಿಂದ ಹಾಗೆಯೇ ಸ್ಥಾನಾಂತರಕ್ಕೆ ಗೋಪ್ಯವಾಗಿ

ತೆಗೆದುಕೊಂಡು ಹೋಗಲು ಧೀರರಾದ ಭಾಗವತರನ್ನು ಸರ್ವಾಧಿಕಾರಿಯು ಗೊತ್ತುಮಾಡಿರುವನು.

**ಪರಾಂ**—ಮೂಲಮೂರ್ತಿಗಳ ಗೋಪನ—?

**ಕೇಶವ**—ಮೂರ್ತಿಗಳಿಗೆ ಮರೆಯಾಗಿ ಕಲ್ಲು ಗೋಡೆಗಳನ್ನು ಕಟ್ಟಿ, ಮುಂದುಗಡೆ ದಾರು ಪ್ರತಿಮೆಗಳನ್ನು ನಿಲ್ಲಿಸಬೇಕೆಂದು ನಿಶ್ಚಯಿಸಿದ್ದಾರೆ. ಒಂದು ವೇಳೆ ಯವನರು ದೇವಾಲಯದೊಳಕ್ಕೆ ನುಗ್ಗಿದರೆ, ಅವರ ಪೆಟ್ಟು ಈ ಕೃತಕ ವಿಗ್ರಹಗಳ ಮೇಲೆ ಬಿದ್ದು, ಮೂಲ ಮೂರ್ತಿಗಳು ನಿರಪಾಯವಾಗಿರುವುವು.

**೨ನೆಯ ಶ್ರೀವೈ**—ಅಲ್ಲಿಯವರೆಗೂ ಅವರನ್ನು ಬಿಡುವರಾರು? ಅವರು ಒಳಕ್ಕೆ ನುಗ್ಗಿದರೆ ನಾವು ಹೊರಗೆ ಬೆಲ್ಲ ತಿನ್ನುತ್ತಿರುವೆವೆ?

**ಪರಾಂ**—ಏನು ಮಾಡುವಿರೋ ನೋಡೋಣ.

**೧ನೆಯ ಶ್ರೀವೈ**—ನಮ್ಮನ್ನು ಅಂಜುಬುರುಕಿಗಳೆಂದು ತಿಳಿಯಬೇಡಿ. ನಮಗೆ ಶಸ್ತ್ರಾಸ್ತ್ರಗಳಿಲ್ಲದಿದ್ದರೂ ಶೌರ್ಯಸಾಹಸಗಳಿಗೇನೂ ಕಡಿಮೆ ಇಲ್ಲ. ಬಾಹುಬಲವಲ್ಪವಾಗಿದ್ದರೂ ಭಕ್ತಿಬಲವು ಅಪಾರವಾಗಿದೆ.

**ಕೇಶವ**—ಅದೀಗ ಧೀರರ ಮಾತು. ಕ್ರಿಯಾಸಿದ್ಧಿಯಾಗುವುದು ಸತ್ತ್ವೋದ್ರೇಕದಿಂದಲೇ ಹೊರತು ಉಪಕರಣ ಬಾಹುಳ್ಯದಿಂದ ಅಲ್ಲವೆಂಬುದು ನಿಮಗೇನು ತಿಳಿಯದೆ?

**೨ನೆಯ ಶ್ರೀವೈ**—ಆ ಹಾಳು ಯವನರ ಯುದ್ಧಸಾಮಗ್ರಿ ನಮ್ಮಲ್ಲಿಲ್ಲದಿದ್ದರೇನು? ನಮ್ಮ ಹಳೆಯ ಆಯುಧಗಳೇ ನಮಗೆ ಸಾಲವೆ? ಕತ್ತಿಯಿಂದ ಕಡಿಯಲಾರೆವೆ? ಈಟಿಯಿಂದ ತಿವಿಯಲಾರೆವೆ? ಮುಸಲದಿಂದ ಹೊಡೆಯಲಾರೆವೆ? ಯಾವುದೂ ಸಿಕ್ಕದಿದ್ದರೆ ಮುಷ್ಟಿಯಿಂದ ಗುದ್ದಲಾರೆವೆ? ಕೈಯಿಂದ ಅಪ್ಪಳಿಸಿ ಕೆಡಹಿ ಕಾಲಿನಿಂದ ತುಳಿಯಲಾರೆವೆ? ರಂಗಪತಿಯ ಹೆಸರಿನಲ್ಲಿ ಕೊಟ್ಟ ಏಟು ಸುದರ್ಶನ ಪ್ರಯೋಗವಾಗಬೇಕಲ್ಲವೆ?

**ಪರಾಂ**—ಭಕ್ತಪುಂಗವರೆ, ಎದ್ದು ನಡೆಯಿರಿ. ನಿಮ್ಮ ನಿಮ್ಮ ಮಿತ್ರವರ್ಗಗಳನ್ನೂ ಬಂಧುವರ್ಗಗಳನ್ನೂ ಹುರಿದುಂಬಿಸಿ ಕ್ಷೇತ್ರ

ಸಂರಕ್ಷಣೆಗೆ ನಿಲ್ಲಿಸಿರಿ. ತೆಂಕಲೆ ವಡಗಲೆ ವಿವಾದಗಳನ್ನೂ ಶೈವ ವೈಷ್ಣವ ವಿವಾದಗಳನ್ನೂ ಸಹ ಮರೆತು ವೇದಧರ್ಮದ ಮೇಲೆ ದೃಷ್ಟಿಯಿಡ ಬೇಕಾದ ಕಾಲವಿದು. ಕಾದಿ ಬದುಕಿದರೆ ರಂಗಧಾಮ ಸುಖವು ಪುನಃ ಇಹ ದಲ್ಲಿಯೇ ಸಿದ್ಧವಾಗಿರುವುದು; ಮಡಿದರಂತೂ ಆ ಸುಖವು ಅಪರಿಮಿತ ವಾಗಿ, ಶಾಶ್ವತವಾಗಿ ದೊರೆಯುವುದು. ಇವೆರಡೂ ಬೇಡವೆಂದು ದೂರ ನಿಂತವರು ಧರ್ಮಭ್ರಷ್ಟರಾಗಿ, ದುಷ್ಟಹತರಾಗಿ, ಅಘೋರಲೋಕಗಳಿಗೆ ಬೀಳುವುದು ಖಂಡಿತ.

**೧ನೆಯ ಶ್ರೀವೈ**—ಇದೋ, ಹೊರಟೆವು.

**೨ನೆಯ ಶ್ರೀವೈ**—ಹೇಡಿಗಳಾಗಿ ಬಾಳುವುದಕ್ಕಿಂತ ಧೀರರಾಗಿ ಸಾಯುವುದು ಮೇಲಲ್ಲವೆ? ನಡೆಯಿರಿ.

**೩ನೆಯ ಶ್ರೀವೈ** — ಕತ್ತಿಗಳನ್ನೋ, ಖಡ್ಗಗಳನ್ನೋ, ಒನಕೆ ಗಳನ್ನೋ, ದೊಣ್ಣೆಗಳನ್ನೋ, ಸಿಕ್ಕಿದುದನ್ನು ಹಿಡಿದುಕೊಂಡು ಬೇಗ ಬೇಗ ಬಂದು ನಿಲ್ಲೋಣ. ಬರಿಯ ಮಾತಿನಿಂದೇನು?

**ಎಲ್ಲರೂ**—ನಡೆಯಿರಿ, ನಡೆಯಿರಿ.

[ಭಜನೆಯವರೆಲ್ಲರೂ ಹೋಗುವರು.

**ಪರಾಂ**—. . . . ಏನೂ ಅರಿಯದ ಈ ಜನರಿಗೇನೋ ಆವೇಶ ವನ್ನು ತಂದುದಾಯಿತು; ಇದರಿಂದಾಗುವ ಫಲವನ್ನು ಮಾತ್ರ ಹೇಳಿ ಕೊಳ್ಳುವ ಹಾಗಿಲ್ಲ.

**ಕೇಶವ**—ನಾವಿನ್ನೇನು ಮಾಡಬಹುದು? ನಮಗಿರುವ ಸಹಾಯ ಸಂಪತ್ತು ಇಷ್ಟೇ.

**ಪರಾಂ**—ಎಷ್ಟೋ ದಿನಗಳಿಂದ ಯುದ್ಧ ಸನ್ನದ್ಧಗಳಾಗಿ, ವೀರಾಧಿ ವೀರರ ಕೈಕೆಳಗೆ ನಡೆದ ಮಹಾಸೈನ್ಯಗಳೇ ಆ ತುರುಷ್ಕರ ಪೆಟ್ಟಿನಿಂದ ಧ್ವಂಸವಾದವು. ಈ ಅಗ್ರಹಾರದ ಗುಂಪು ಅವರೆದುರಿಗೆ ನಿಲ್ಲಲಾ ಗುವುದೆ?

**ಕೇಶವ**—ಆ ಆಶೆಯನ್ನಿಟ್ಟುಕೊಂಡಿರುವವರಾರು? ಶ್ರೀರಂಗದ ಭಕ್ತರು ದಿವ್ಯ ದೇಶವನ್ನು ಮ್ಲೇಚ್ಛರ ಪಾಲುಮಾಡಿ ಓಡಿಹೋದರೆಂದು ಕಂಡು ಕೇಳಿದವರು ಅಂದುಕೊಳ್ಳದಿದ್ದರೆ ಸಾಕು. . . . . . ನಮ್ಮ ಮಕ್ಕಳು ಮೊಮ್ಮಕ್ಕಳಾರಾದರೂ ಬದುಕಿದ್ದರೆ ಅವರಿಗೆ ನಮ್ಮ ನೆನಪಿನಿಂದ ನಾಚಿಕೆಯಾಗದಿದ್ದರೆ ಸಾಕು . . . . . ನಡೆಯಿರಿ, ಹೋಗೋಣ.

[ತೆರೆ ಬೀಳುವುದು.

---

## ದೃಶ್ಯ ೪

[ಸ್ಥಳ: ಶ್ರೀರಂಗದಲ್ಲಿ ಒಂದು ಮಣ್ಣುಮನೆ; ಕಾಲ: ರಾತ್ರಿ. ಗ್ರಂಥರಾಶಿಯ ಮಧ್ಯದಲ್ಲಿ ಸುದರ್ಶನ ಭಟ್ಟರು ಚಿಂತಾಕ್ರಾಂತರಾಗಿ ಕುಳಿತಿರುವರು.

**ಸುದರ್ಶನ ಭಟ್ಟ**—. . . ಹೇ ಆಪತ್ಸಖ, ರಂಗನಾಥ! ಯಾವ ಒಂದು ಸುಖ ಮಾತ್ರ ಅಚ್ಯುತವಾದುದೆಂದು ನಂಬಿದ್ದೆನೋ ಅದಕ್ಕೂ ಈಗ ಚ್ಯುತಿ ಬರುವಂತೆ ಇರುವುದಲ್ಲಾ! ಎಂತಹ ಕಾಲ ಬಂದಿದೆ!

(ವೃತ್ತ)

ನಿನ್ನಂ ಭಾವಿಸಿ ನಿನ್ನನರ್ಚಿಸಿ ಸದಾನಂದಾಶ್ರುಪೂರ್ಣಾಕ್ಷಿಯಿಂ।
ನಿನ್ನಾಮೂರ್ತಿಯ ಕಂಡು ನಿನ್ನ ಪದಪಂಕೇಜಾಮೃತಾಸ್ವಾದದಿಂ॥
ದೆನ್ನೀ ಜೀವಕೆ ನಿತ್ಯಸೌಖ್ಯವ ಗಳಿಪ್ಪೌತ್ಸುಕ್ಯಮುಂ ಬಿಟ್ಟು ನಾಂ।
ನಿನ್ನಂ ಕಾಣದೆ ಬಾಳ್ವೆನೆಂತು ಜನಕಾ ಶ್ರೀಮಜ್ಜಗನ್ನಾಯಕಾ॥

ಶ್ರುತಿವಿದ್ವೇಷಣರಾ ತುರುಷ್ಕಹತಕರ್ ದೌರಾತ್ಮ್ಯದಿಂ ಜೃಂಭಿಸಲ್।
ಕ್ಷಿತಿಯುಂ ಪಾಲಿಪರಾರದಾರ್ ಪೊರೆವರಾ ವೇದೋಕ್ತ ಧರ್ಮಂಗಳಂ॥
ಸ್ಮೃತಿ ತಾಂ ನಿಲ್ಗುಮದೆಂತು ಶಾಸ್ತ್ರಚಯಮುಂ ರಕ್ಷಿಪ್ಪರಾರಕ್ಕಟಾ।
ಗತಿಯಾರ್ ಸಾಧುಜನರ್ಗೆ ರಂಗವಿಭು ನೀಂ ಶ್ರೀರಂಗಮುಂ ಬಿಟ್ಟಿರಲ್॥

ಸ್ಥಿರಮಲ್ತೈಹಿಕ ಭೋಗ ಭಾಗ್ಯಗಳೊಳೊಂದುಂ ದೀನಬಂಧೋಭವ।
ಚ್ಚರಣಾಂಭೋರುಹ ಸನ್ನಿಧಾನ ಸುಖಮೊಂದೇ ನಿತ್ಯಮೆಂದಾನಿರಲ್॥

**ಹರಿ ನಿನ್ನಾಶ್ರಯವಿಂದಶಾಶ್ವತವೆನಿಪ್ಪಂತಾದುದೇ ದೇವ ಕಿಂ।**
**ಕರ ಸಾಮರ್ಥ್ಯ ಪರೀಕ್ಷೆಯೇಂ ಪೊರೆವುದೈ ನಿರ್ವ್ಯಾಜ ಕಾರುಣ್ಯದಿಂ ॥**

ದನುಜವಿರೋಧಿ ಬಾರ ದುರಿತಾಂತಕ ಬಾರ ರಮೇಶ ಬಾರ ಪಾ।
ವನತಮನಾಮ ಬಾರ ನಿಗಮಾಶ್ರಯ ಬಾರ ಪರೇಶ ಬಾರ ಚಿ ॥
ದ್ಘನ ಶುಭಮೂರ್ತಿ ಬಾರ ಸುಗುಣಾಕರ ಬಾರ ದಯಾಳು ಬಾರ ಸ।
ಜ್ಜನಭಯಹಾರಿ ಬಾರ ಹರಿ ಬಾರೆಲೆ ಬಾರೆಲೆ ರಂಗಭೂಪತೀ ॥

[ಹೀಗೆಂದು ಹಂಬಲಿಸಿ ಖಿನ್ನರಾಗಿ ತಲೆಬಾಗಿಸಿ ಕುಳಿತಿರುವರು.

ಪ್ರವೇಶ: ವೇಂಕಟನಾಥಾರ್ಯರು.]

**ವೇಂಕಟ**—ಭಾಗವತೋತ್ತಮ, ಸಾಷ್ಟಾಂಗಪ್ರಣಾಮಗಳನ್ನು ಒಪ್ಪಿಸಿಕೊಳ್ಳಬೇಕು.

**ಸುದರ್ಶನ**—ವೇಂಕಟನಾಥಾರ್ಯ, ದಾಸನಲ್ಲಿ ದಯೆಗೈಯ ಬೇಕು. ತಮ್ಮನ್ನೇ ಧ್ಯಾನಿಸುತ್ತ ಕುಳಿತಿದ್ದೆ. ತಮ್ಮನ್ನು ಬಿಟ್ಟರೆ ನನಗೆ ಮಿತ್ರರಾರು?

**ವೇಂಕಟ**—ತಮ್ಮ ವಿಶ್ವಾಸವು ಹಾಗೆಸ್ನಿಸಬಹುದು. ಪ್ರಕೃತ, ತಮ್ಮ ಆಲೋಚನೆಯೇನು?

**ಸುದರ್ಶನ**—ಆಲೋಚನೆ ಮಾಡಬೇಕಾದ ಅವಶ್ಯಕತೆಯೇ ಇಲ್ಲ ವಲ್ಲ. ಕರ್ತವ್ಯವು ಸ್ಪಷ್ಟವಾಗಿಯೇ ಇರುವುದು.

**ವೇಂಕಟ**—ಹೇಗೆ?

**ಸುದರ್ಶನ**—ಈ ದೇಹದಲ್ಲಿ ಉಸಿರಾಡುವವರೆಗೂ ಇದನ್ನು ರಂಗನಾಥನ ಸೇವೆಗೇ ಉಪಯೋಗಿಸಬೇಕಲ್ಲವೆ? ನನ್ನ ಸಹಧರ್ಮಿಣಿಯೂ ಹಾಗೆಯೇ ತಿಳಿದಿರುವಳು. ಕ್ಷೇತ್ರ ಸಂರಕ್ಷಣೆಗಾಗಿ ನಿಂತು ಈಶ್ವರನು ಶಕ್ತಿ ಕೊಟ್ಟಂತೆ ಹೋರಾಡುವುದು ನನ್ನ ಕರ್ತವ್ಯ; ಶತ್ರುಗಳ ಕೈಗೆ ಸಿಕ್ಕುವುದಕ್ಕೆ ಮುಂಚೆ ಅಗ್ನಿದೇವನನ್ನಾಶ್ರಯಿಸು ವುದು ನನ್ನ ಕೈಹಿಡಿದವಳ ಕರ್ತವ್ಯ.

**ವೇಂಕಟಿ**—ಮಕ್ಕಳ ಗತಿ ?

**ಸುದರ್ಶನ**—ಅದು ತಮ್ಮ ಮೇಲಿನ ಭಾರ.

**ವೇಂಕಟಿ**—ನಾನೂ ತಮ್ಮ ದಾರಿಯಲ್ಲಿಯೇ ನಡೆಯಬೇಕೆಂದು ಸಂಕಲ್ಪಿಸಿರುವೆನಲ್ಲಾ !

**ಸುದರ್ಶನ**—ತಾವು ಹಾಗೆ ಸಂಕಲ್ಪಿಸಲಾಗದೆಂದು ವಿಜ್ಞಾಪಿಸುವುದಕ್ಕಾಗಿಯೇ ನಾನು ತಮ್ಮನ್ನು ಧ್ಯಾನಿಸುತ್ತಿದ್ದುದು.

**ವೇಂಕಟಿ**—ಅದೇನು ? ತಮ್ಮೊಡನೆ ನಾನೂ ಯಥಾಶಕ್ತಿ ಪುಣ್ಯ ಸಂಪಾದನೆ ಮಾಡಲಾಗದೆ ? ದಿವ್ಯದೇಶವು ಮ್ಲೇಚ್ಛಾಕ್ರಾಂತವಾಗಿರುವಾಗ ತಮ್ಮಂತಹವರನ್ನು ಬಿಟ್ಟು ತಲೆ ತಪ್ಪಿಸಿಕೊಂಡು ಓಡಿಹೋಗುವುದೆಂತಹ ಧರ್ಮ ?

**ಸುದರ್ಶನ**—ತಾವು ಹಾಗೆ ಭಾವಿಸಲಾಗದು. ಬದುಕಿ ವೇದ ರಹಸ್ಯಗಳನ್ನು ಕಾಪಾಡುವುದು ಧರ್ಮವಲ್ಲವೆ ?

**ವೇಂಕಟಿ**—ಅದು ನನ್ನಂತಹ ಅಲ್ಪನಿಂದಲೇ ಆಗಬೇಕೆ ? ಅಪೌರುಷೇಯವಾದ ವೇದಗಳಿಗೂ ತತ್ಸಾರಭೂತವಾದ ತತ್ತ್ವಾರ್ಥಗಳಿಗೂ ಚ್ಯುತಿಯುಂಟೆ ? ಅವುಗಳನ್ನು ಪರಿರಕ್ಷಿಸಲು ಶ್ರೀಮನ್ನಾರಾಯಣನು ಎಷ್ಟೋ ಉಪಾಯಗಳನ್ನು ಕಲ್ಪಿಸಿಯೇ ಇರುವನು. ನನ್ನನ್ನು ಬಿಟ್ಟರೆ ಅವುಗಳಿಗೆ ಬೇರೆ ಗತಿಯಿಲ್ಲವೆಂದು ತಿಳಿದುಕೊಳ್ಳಲೆ? ಅಂತಹ ದುರಭಿಮಾನಕ್ಕೆಡೆಗೊಟ್ಟು, ಜನ್ಮಸಾಫಲ್ಯಕ್ಕಾಗಿ ಒದಗಿರುವ ಈ ಅವಕಾಶವನ್ನು ಕಳೆದುಕೊಳ್ಳಲೆ? ಆರ್ಯರೆ, ಸುದರ್ಶನಾಚಾರ್ಯರೆ, ಹಾಗಾಗಲಾರದು. ನಾನೂ ತಮ್ಮೊಡನೆ ಧರ್ಮಯುದ್ಧಕ್ಕೆ ನಿಂತು ಈ ಕಳೇಬರವನ್ನು ಭಗವತ್ಸೇವೆಯಲ್ಲಿ ತ್ಯಾಗಮಾಡಬೇಕು.

**ಸುದರ್ಶನ**—ವೈಷ್ಣವಾಗ್ರಣಿ, ನಾನು ಕೃತ್ರಿಮ ಮಿತ್ರನಲ್ಲವೆಂದು ತಮಗೆ ನಂಬುಗೆಯಿದ್ದರೆ ನನ್ನ ಬಿನ್ನಹವನ್ನು ಲಾಲಿಸಬೇಕು. ದಿವ್ಯ ಕ್ಷೇತ್ರ ರಕ್ಷಣೆಗಾಗಿ ದೇಹವನ್ನರ್ಪಿಸಬಲ್ಲವರು ಹನ್ನೆರಡು ಸಹಸ್ರ ಮಂದಿ ಇರುವರು. ವೇದಾಂತ ಗುರುವೆಂಬ ಹೆಸರನ್ನು ಸಾರ್ಥಕ

ಗೊಳಿಸಬಲ್ಲವರು ಮಾತ್ರ ಅಷ್ಟು ಮಂದಿಯೊಳಗೆ ತಮ್ಮ ವಿನಾ ಬೇರೊಬ್ಬರಿಲ್ಲ. ವ್ಯಾಕರಣಾದಿ ಶಾಸ್ತ್ರಗಳ ಪಾರವನ್ನು ಕಂಡ ಪಂಡಿತರು ಲೋಕದಲ್ಲಿ ಎಷ್ಟೋ ಮಂದಿ ಇರಬಹುದು; ಗುರುಪರಂಪರಾಗತಗಳಾದ ಗೂಢಾರ್ಥಗಳನ್ನು ತಿಳಿದು ಅನುಸಂಧಾನ ಮಾಡಿರತಕ್ಕವರು ಮಾತ್ರ ಅತಿ ವಿರಳರೆಂಬುದು ತಮಗೆ ತಿಳಿಯದ ವಿಷಯವಲ್ಲ. ಭಗವದ್ರಾಮಾನುಜ ಸಿದ್ಧಾಂತದ ರಹಸ್ಯ ರತ್ನಗಳನ್ನು ಶಿಷ್ಯ ಪ್ರಶಿಷ್ಯರ ಮೂಲಕ ಲೋಕಕ್ಕನುಗ್ರಹಿಸಲು ತಮ್ಮಂತೆ ಶಕ್ತಿಯುಳ್ಳವರಾರೂ ಇಲ್ಲವೆಂದು ಶ್ರೀವೈಷ್ಣವ ಪ್ರಪಂಚವೆಲ್ಲವೂ ಏಕಕಂಠ್ಯದಿಂದ ಉದ್ಘೋಷಿಸುತ್ತಿದೆ. ಅದನ್ನಾದರೂ ಗೌರವಿಸಬೇಡವೆ? ತಮಗೆ ಅಪಾಯ ಸಂಭವಿಸಿದರೆ ಶ್ರೀಭಾಷ್ಯ ದಿವ್ಯ ಪ್ರಬಂಧಗಳಿಗೆ ಅಪಾಯ ಬಂದಂತೆಯೇ ಸರಿ. ತಮ್ಮ ಮುಂದಿನ ಕೃತ್ಯವನ್ನು ಈ ವಿವೇಚನೆಯಿಂದ ನಿಶ್ಚಯಿಸಬೇಕು. ದೇಹಾಭಿಮಾನವು ಕೂಡದೆಂದು ಎಲ್ಲರೂ ಒಪ್ಪುವರು. ಆದರೆ ದೇಹಧಾರಣೆಯು ಧರ್ಮ ಪೋಷಣೆಗೆ ಸಾಧಕವಾಗುವುದಾದರೆ ಸರ್ವ ಪ್ರಯತ್ನದಿಂದಲೂ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕಲ್ಲವೆ?

**ವೇಂಕಟ**—ತಮ್ಮಂತಹ ಪೂಜ್ಯರ ನಿಶ್ಚಯವು ಆ ರೀತಿಯಿದ್ದರೆ ಅದು ನನಗೆ ಸರ್ವಥಾ ಕರ್ತವ್ಯವೇ ಸರಿ. ಆದರೂ ಇಂತಹ ವಿಷಮ ಸಮಯದಲ್ಲಿ ಶ್ರೀಪಾದ ಸೇವಾಧುರಂಧರರಾಗಿ ನಿಂತವರಿಗೆ ಸಹಾಯವಾಗಿರುವುದಕ್ಕೆ ಪ್ರತಿಯಾಗಿ, ಓಡಿಹೋಗಿ ಪ್ರಾಣಗಳನ್ನುಳಿಸಿಕೊಳ್ಳಬೇಕೆಂದರೆ ಮನಸ್ಸು ಹಿಮ್ಮೆಟ್ಟುತ್ತಿದೆ.

**ಸುದರ್ಶನ**—ತಾವು ಸಹಾಯವಾಗಿರಬೇಕೆಂದೇ ನಾನೂ ಬಯಸುತ್ತಿರುವುದು?

**ವೇಂಕಟ**—ಅದು ಹೇಗೆ?

**ಸುದರ್ಶನ**—ನನ್ನ ಕುಮಾರರ ಪುರೋವೃದ್ಧಿಯು ತಮ್ಮನ್ನೇ ಸೇರಿದುದೆಂದು ಮೊದಲೇ ವಿಜ್ಞಾಪಿಸಿದೆನಷ್ಟೆ.

**ವೇಂಕಟ**—ರಂಗನಾಥನೇ ಅದನ್ನಾಗಮಾಡಿಸುವನು.

**ಸುದರ್ಶನ**—ಮತ್ತೊಂದು ಕೋರಿಕೆಯುಂಟು.

**ವೇಂಕಟ**—ಅದೇನು ?

**ಸುದರ್ಶನ**—ಅಸ್ಮದ್ಗುರುಗಳಾದ ವರದಾಚಾರ್ಯವರ್ಯರ ಮುಖದಿಂದ ಬಂದ ವ್ಯಾಖ್ಯಾನಮಾಲೆಯನ್ನು ತಾಳಪತ್ರಗಳಲ್ಲುಲ್ಲೇಖಿಸಿ ಅದಕ್ಕೆ ಶ್ರುತ ಪ್ರಕಾಶವೆಂದು ಹೆಸರಿಟ್ಟಿರುವೆನು. ಅದನ್ನು ಪರಿಶೋಧಿಸಿ ಪ್ರಕಟಗೊಳಿಸುವ ಭಾರವೂ ತಮ್ಮದಾಗಿದೆ.

**ವೇಂಕಟ**—ಈ ಆಜ್ಞೆಯನ್ನು ಶಿರಸಾಧರಿಸುವೆನು.

**ಸುದರ್ಶನ**—"ನ ಮೇ ಭಕ್ತಃ ಪ್ರಣಶ್ಯತಿ" ಎಂದು ಮಾಡಿದ ವಾಗ್ದಾನವನ್ನು ರಂಗಪತಿಯು ಮರೆಯಲಾರನು. ಅದರ ಮೇಲೆ ನಮಗೆ ಆಗಬೇಕಾದುದೇನು? ಮಿತ್ರವರ್ಯರೆ, ಇನ್ನು ನಾನು ನಿಶ್ಚಿಂತನಾಗಿ ಯುದ್ಧಭೂಮಿಗೆ ಹೊರಡಲು ಸಿದ್ಧನಾಗುವೆನು. (**ಹಿಂದುಗಡೆ ತಿರುಗಿ ನೋಡಿ**) ದೇವಿ, ಮಕ್ಕಳನ್ನು ಕರೆದುಕೊಂಡು ಬಾ.

[**ಪ್ರವೇಶ: ವೇದವತಿ, ಮಕ್ಕಳು.**]

ಮಗೂ ವೇದೂ, ಅಪ್ಪಾ ಪರಾಶರ, ಬನ್ನಿ; ದೇಶಿಕರನ್ನು ಸೇವಿಸಿ.

[**ತಾಯಿ ಮಕ್ಕಳು ವೇಂಕಟನಾಥರಿಗೆ ನಮಸ್ಕರಿಸುವರು.**]

**ವೇಂಕಟ**—ಅಮ್ಮಾ ವೇದವತೀದೇವಿ, ನೀನೇ ಧನ್ಯಳು. ಸಹಧರ್ಮಿಣಿಯೆಂಬ ಹೆಸರು ನಿನಗೆ ಸಲ್ಲುವುದು.

**ವೇದ**—ಎಲ್ಲವೂ ತಮ್ಮ ಆಶೀರ್ವಾದದಂತೆ.

**ವೇಂಕಟ**—ಆಚಾರ್ಯರು ತೋರಿರುವ ಧೀರತೆಯು ಪುರುಷಜಾತಿಗೆ ಸ್ವಾಭಾವಿಕವಾದುದೆಂದು ಒಂದು ವೇಳೆ ಹೇಳಬಹುದು. ಇಂತಹ ಪುತ್ರರನ್ನಾದರೂ ಬಿಟ್ಟು, ಪತಿಯಿಂದ ಮಾತ್ರ ಅಗಲದೆ ಇರಬೇಕೆಂಬ ನಿನ್ನ ಪ್ರತಿಜ್ಞೆಯು ಲೋಕೋತ್ತರವಾಗಿ, ಸೀತೆ ಸಾವಿತ್ರಿಯರ ಹೆಸರನ್ನು ಜ್ಞಾಪಕಕ್ಕೆ ತರುವುದಾಗಿದೆ.

**ವೇದ**—ಪತಿಯ ಪುಣ್ಯಕಾರ್ಯದಲ್ಲಿ ಭಾಗ ಬೇಡವೆಂದ ಹೆಂಗಸಿಗೆ ಸದ್ಗತಿಪಡೆಯಲು ಬೇರೆ ಉಪಾಯವೇನುಂಟು? ನನ್ನ ಹಿತವನ್ನು ಬಯ

ಸಿಯೇ ನಾನು ಪತಿ ಸನ್ನಿಧಿಯನ್ನು ಬಿಡಕೂಡದೆಂದು ನಿಶ್ಚಯಿಸಿರು ವುದು. ಲೋಕದಲ್ಲಿ ದುಷ್ಟರ ಹಾವಳಿ ಹೆಚ್ಚಿರುವಾಗ ಪತಿಯ ಬಳಿ ಇಲ್ಲದ ಸತಿಯು ಮಾನವತಿಯಾಗಿ ಬದುಕುವುದು ಕಷ್ಟವಲ್ಲವೆ? ಇನ್ನು, ಮಕ್ಕಳನ್ನು ಕಾಪಾಡುವುದಕ್ಕೆ ತಮ್ಮಂತಹ ಆಪದ್ಬಾಂಧವ ರಿರುವಾಗ ಚಿಂತೆಯೇನು?

**ಸುದರ್ಶನ**—ಹೊತ್ತು ಹುಟ್ಟುತ ಬಂತು. ಇನ್ನಿವರನ್ನು ಕಳುಹಿಸಿಕೊಡೋಣ.

**ವೇದವತಿ**—ಆಗಬಹುದು.

**ಸುದರ್ಶನ**—ದೇಶಿಕವರ್ಯ, ಹೆಚ್ಚಾಗಿ ಹೇಳಬೇಕಾದುದೇನಿದೆ?

[ಓಲೆಯ ಪುಸ್ತಕವನ್ನು ಕೈಗೆ ಕೊಟ್ಟು

(ಕಂದ) ಇದು ಸದ್ವಿದ್ಯಾನಿಲಯಂ।

[ಮಕ್ಕಳನ್ನು ವೇಂಕಟನಾಥಾರ್ಯರ ತೊಡೆಯಮೇಲೆ ಕೂಡಿಸಿ

ಸದಮಲವಂಶ ಪ್ರದೀಪಕರ್ ಬಾಲರಿವರ್ ॥
ವಿದಿತಾಖಿಲ ತತ್ತ್ವರು ತಾ।
ವಿದೆ ಮತ್ಪುಣ್ಯೋದಯಂ ಪ್ರಪತ್ತಿಗೆ ಸಮಯಂ ॥

ಅಪ್ಪಾ ವೇದಾ, ಪರಾಶರ, ಇನ್ನು ಮುಂದೆ ದೇಶಿಕರೇ ನಿಮಗೆ ತಾಯಿತಂದೆ. (ಮಕ್ಕಳು ಎದ್ದುಬಂದು ನಮಸ್ಕರಿಸಿ ನಿಲ್ಲುವರು. ಅವರ ಮೈತಡವಿ) ಅವರು ಹೇಳಿದಂತೆ ನಡೆದುಕೊಂಡು, ಅವರ ಪ್ರೀತಿಯಿಂದ ಬೆಳೆದು, ಬುದ್ಧಿಶಾಲಿಗಳಾಗಿ ಬದುಕಿರಿ. ನಾವು ರಂಗನಾಥನ ಸೇವೆಗೆ ಹೋಗಿ ಬರುವೆವು. (ಹೆಂಡತಿಯ ಕಡೆ ತಿರುಗಿ) ದೇವಿ, ನೀನೂ ಮಕ್ಕಳಿಗೆ ಆಶೀರ್ವಾದ ಮಾಡು.

**ವೇದವತಿ**—(ನಿಟ್ಟುಸಿರು ಬಿಟ್ಟು) ಏನು ಹೇಳಲಿ? . . . . . ಮಾತೇನೂ ಬಾರದು . . . . . (ಮಕ್ಕಳನ್ನೆತ್ತಿ ಮುದ್ದಿಟ್ಟು) ಮುದ್ದು ಕಂದಗಳಿರಾ, ನಾವು ಹೋಗಿ ಬರುವೆವು. ಧೈರ್ಯದಿಂದ ಇದ್ದು

ದೇಶಿಕರ ಇಷ್ಟದಂತೆ ನಡೆದು, ವಿದ್ಯೆ ಕಲಿತು, ಒಳ್ಳೆಯವರೆನ್ನಿಸಿಕೊಳ್ಳಿರಿ. ದೇವರು ನಿಮ್ಮನ್ನು ಕಾಪಾಡುವನು.

[ಹಾಡು ರಾಗ: ಆನಂದಭೈರವಿ.]

ಪೋಗಿ ಬರ್ಪವು ಕುಲಧನರೇ—ನಂದನರೇ ||ಪ||
ಈ—ದೇಶಿಕರೇ ನಿಮ್ಮ ಪಾಲಿಪರೊಲವಿಂ|| ಅ|ಪ||

ಶ್ರೀಪತಿ ರಂಗನ ಪದವಾ—ಸೇವಿಸುವ|
ನಮ್ಮ—ಆ ಪುಣ್ಯವೇ ನಿಮಗೀವುದು ಶುಭವಾ || ೧ ||

ಶೋಕಿಸದಿರಿ ನೀವದೆಂದುಂ—ಇನಿಸೊಂದುಂ|
ನಿಮ್ಮ—ಲೋಕೇಶ ಸಲಹುವನೆಂದುಂ ಮುಕುಂದಂ || ೨ ||

ಮತಿವಂತರಾಗಿರಿ ಕಂದಾ—ನಯದಿಂದಾ|
ನಿಮ್ಮ—ಪಿತನಂತೆ ಪಾಲಿಪರಿವರೊಲವಿಂದಾ || ೩ ||

ಈ ಕಾಲವೇ ನಿಲದೆಂದುಂ—ತಾನೆಂದುಂ|
ನಮ್ಮ—ನೋವಿ ಮರಳಿ ಸೇರಿಪನಾ ಗೋವಿಂದಂ || ೪ ||

**ವೇಂಕಟ**—ತಾಯೆ, ಸ್ಮರಿಸು, ನಿನ್ನ ಮಾತೇನೋ ಧೀರ ಸತಿಯದು; ಧ್ವನಿ ಮಾತ್ರ ಸರಳವಾತೆಯದು . . . . . . . ಆಹಾ, ರಂಗನಾಥ! ಪುತ್ರಪ್ರೇಮವೂ ಪತಿಭಕ್ತಿಯೂ ಈ ರೀತಿ ಒಂದ ಕ್ಕೊಂದು ವಿರೋಧವಾಗುವಂತೆ ಮಾಡಬಹುದೆ?

**ವೇದಾಚಾರ್ಯ ಪರಾಶರರು**—(ತಾಯಿಗೆ ವಂದಿಸಿ) ಅಮ್ಮಾ, ನಿನ್ನ ಬುದ್ಧಿಯ ಮಾತನ್ನು ಮರೆಯೆವು. ನೀವು ಸಂತೋಷದಿಂದ ಹೋಗಿ ಬನ್ನಿರಿ.

**ವೇಂಕಟ**—ಇವರೀಗ ಧೀರರು. ಇಂತಹ ತಾಯಿತಂದೆಗಳಿಂದ ಜನ್ಮವನ್ನು ಪಡೆದವರು ಭೀರುಗಳು ಹೇಗಾದಾರು? ಸಿಂಹದ ಹೊಟ್ಟೆ ಯಲ್ಲಿ ಜಂಬುಕವು ಹುಟ್ಟೀತೆ?

[ಸುದರ್ಶನಾಚಾರ್ಯರ ಕಡೆ ತಿರುಗಿ ಪುಸ್ತಕವನ್ನೂ ಹುಡುಗರನ್ನೂ ತೋರಿಸುತ್ತ

(ಕಂದ) ಇದರಿಂ ಗುರುಕಾರ್ಯಂ ತಾ।
ನೊದವಿಹುದೆನಗಿವರಿನಾರ್ಯಜನ ಕೈಂಕರ್ಯಂ॥
ಮುದದಿಂ ನಡೆವುದು ನೀವಾ।
ಸದಯಂ ರಂಗೇಶ ನೋವುಗೆಮ್ಮಂ ನಿಮ್ಮಂ ॥

(ವೃತ್ತ)

ಶ್ರೀಲೋಲಂ ಶ್ರಿತವತ್ಸಲಂ ಶ್ರುತಿಮತ ಪ್ರೋದ್ಬೋಧಶೀಲಂ ಸಕೃ।
ಲ್ಲೀಲಾವ್ಯಾಜದೊಳಿಂತು ಗೆಯ್ದೊಡಮುದೇನಾತಂ ಮಗುಳ್ದೆಮ್ಮ ದೀ॥
ನಾಲಾಪಂಗಳ ಕೇಳ್ದು ಕಾಯನೆ ಕರೀಂದ್ರಂಗಾದುದಂ ಕಾಣಿರೇಂ
ಕಾಲಂ ನಿಲ್ಲದೆ ಮಾಡಿಕುಂ ಸುಕೃತಿಗಳ್ಗೀಶಾನುಕಂಪಾಪ್ತಿಯಂ॥

ಬಾಲಕರೆ, ನಾವಿನ್ನು ಹೊರಡೋಣವೆ?

[ತೆರೆ ಬೀಳುವುದು

---

## ದೃಶ್ಯ ೫

[ಸ್ಥಳ: ಕಾಶಿ, ವೇಳೆ: ಪ್ರಾತಃಕಾಲ. ವ್ಯಾಸ ವಿಗ್ರಹವು ಗಂಧ ಪುಷ್ಪಾಕ್ಷತೆಗಳಿಂದ ಅಲಂಕೃತವಾಗಿರುವುದು; ಪಕ್ಕಗಳಲ್ಲಿ ಎರಡು ದೀಪಗಳು ಬೆಳಗುತ್ತಿರುವುವು; ಮುಂದುಗಡೆ ಪಂಚಪಾತ್ರೆ, ಪೂಜೋಪಕರಣಗಳು, ಒಂದು ತಾಳೆಯೋಲೆಯ ಪುಸ್ತಕ, ತಾಳಪತ್ರ ಮುಂತಾದುವು ಇರುವುವು. ತೆರೆಯು ಮೇಲಕ್ಕೆ ಹೋಗುವಾಗ್ಗೆ ಮಾಧವ ಭಟ್ಟರು ಸಾಷ್ಟಾಂಗನಮಸ್ಕಾರಮಾಡಿ ಏಳುತ್ತಿರುವರು. ಎದ್ದುನಿಂತು ಕೈಮುಗಿದು ಹೀಗೆ ಪ್ರಾರ್ಥಿಸುವರು.]

**ಮಾಧವ**—(ದ್ವಿಪದೆ)

ಜಯಜಯ ಮುನಿವರ್ಯ ಜಯ ಧರ್ಮಧುರ್ಯ।
ಜಯ ಜಗದ್ಧಿತಕಾರ್ಯ ಜಯ ಮಹಾಚಾರ್ಯ ॥
ಜಯ ಪರಾಶರಪುತ್ರ ಜಯ ಸಾಧು ಮಿತ್ರ।
ಜಯ ಪವಿತ್ರಚರಿತ್ರ ಜಯ ಪುಣ್ಯಪಾತ್ರ ॥

ನೀನಲ್ಲೈ ಬಗೆದು ಮುನ್ನವೆ ಕಾಲಗತಿಯಂ।
ಮಾನವರ ಬಲಕೆ ಕಲಿಯಿಂದಪ್ಪ ಮಿತಿಯಂ॥
ಕರುಣೆಯಿಂದವರ ಜೀವಿತವು ಸತ್ಪಥದೊಳ್।
ಚರಿಪಂತೆ ಬೆಳಕ ನೀಡಿರುವೆ ಕೃತಿಶತದೊಳ್॥

ಪರಪುರುಷನಿಃಶ್ವಸಿತವಹ ನಿಗಮಚಯುವಂ।
ಸುರಮುನಿಮುಖೋದ್ಗೀತ ದಿವ್ಯವಾಙ್ಮಯುವಂ॥
ಪರಮೇಷ್ಠಿ ಮುಖ್ಯ ಸತ್ಕವಿಗಳಿಂ ಪಡೆದು।
ಕರಬದರದಂತದರ ತತ್ತ್ವಗಳ ತಿಳಿದು॥

ಕುಲಗುರುವೆ ನೀನೆಮಗೆ ಶುಭವಾಗಲೆಂದು।
ಸುಲಭದಿಂ ವೇದತೀರ್ಥವು ದೊರೆಯಲೆಂದು॥
ಧರಣಿಯೊಳಗಾದಿವ್ಯ ವಾಙ್ಮಹೋದಧಿಯಂ।
ಪರಿಯಿಸಿಹೆ ನಾಲ್ಕು ಲಹರಿಗಳೊಳತಿದಯೆಯಿಂ॥

ಬಳಿಕಲಾಮ್ನಾಯಾಂಬುನಿಧಿಯೊಳಿಹ ಸುಧೆಯಂ।
ವಿಲಸದಾತ್ಮವಿಚಾರಸಾರಸುಖನಿಧಿಯಂ॥
ಗುರುವೆ ನೀಂ ಸಂಗ್ರಹಿಸಿ ಸೂಕ್ಷ್ಮವಚನಗಳೊಳ್।
ಕರುಣಿಸಿಹೆ ಸೂತ್ರಾಖ್ಯ ಕನಕಕಲಶಗಳೊಳ್॥

ಮತ್ತಮಾ ಶ್ರುತಿಸೂತ್ರಗಳ ರಹಸ್ಯಗಳಂ।
ಬಿತ್ತರಿಸಿ ಜಗಕರುಹೆ ಪರಮತತ್ತ್ವಗಳಂ॥
ವಿರಚಿಸಿದೆ ಪದಿನೆಂಟು ವರಪುರಾಣಗಳಂ।
ಒರೆಯುತ್ತೆ ಮೂಜಗದ ಧರ್ಮ ಮರ್ಮಗಳಂ॥

ಮೇಣೀಧರಾವಲಯುದದ್ಭುತಂಗಳನು।
ಮಾನವರ ಮಾನಸದ ವೈಚಿತ್ರ್ಯಗಳನು॥
ಕರ್ಮ ಶಕ್ತಿಯ ವಿವಿಧ ಸೂಕ್ಷ್ಮಗತಿಗಳನು।
ಧರ್ಮ ಮಾರ್ಗದ ವಿವಿಧ ಸಂಕಷ್ಟಗಳನು॥

ಜೀವ ಜನಪದ ಜಗದ್ವ್ಯಾಪಾರಗಳನು।
ದೇವ ದೇವನ ಮೈಮೆಯನು ಲೀಲೆಗಳನು॥

ಭರತವಂಶದ ಕಥೆಯೊಳುಪಕಥೆಗಳೊಡನೆ।
ಸರಸ ರೀತಿಯೊಳೊರೆದೆ ನವವೇದವಿದೆನೆ ॥

ಜೈಮಿನಿ ಪತಂಜಲಿ ಪ್ರಮುಖ ಶಿಷ್ಯರನು।
ನೇಮಿಸಿದೆ ಲೋಕ ಬೋಧೆಗೆ ಮಹಾತ್ಮರನು ॥
ಈ ಪರಿಯೊಳಾರ್ಷೇಯ ಧರ್ಮ ದೀಪವನು।
ದ್ವೈಪಾಯನಾರ್ಯ ನೀನಾರ್ಯ ವಿಭವವನು ॥

ಶ್ರುತಿಯೊಳುಂ ಸ್ಮೃತಿಯೊಳುಂ ಬ್ರಹ್ಮಸೂತ್ರದೊಳುಂ
ಇತಿಹಾಸದೊಳುಮಾ ಮಹಾಪುರಾಣದೊಳುಂ ॥
ಬೆಳಗಿಸುತೆ ಭರತವರ್ಷದ ಜನರ ಶುಭಕೆ।
ತಳಹದಿಯನಿರಿಸಿರುವೆ ಮೇಣಿಳೆಯ ಹಿತಕೆ ॥

ಬ್ರಹ್ಮಜ್ಞನಾಗಿರ್ದು ತಾಯ ಬಸಿರೊಳಗಂ
ಬ್ರಹ್ಮಬೋಧಕನಾಗಿ ಋಷಿವಂಶಗಳಿಗಂ ॥
ಮೆರೆದ ಶುಕಯೋಗಿಯುಂ ಪಿತೃವಂ ನೀನೆ।
ಪರಮವಿದ್ಯೆಯನವಂಗಿತ್ತವಂ ನೀನೆ ॥

ಸತ್ಯವತಿಯಿಂದೊಗೆದ ಸತ್ಯೈಕಪರನೆ।
ನಿತ್ಯ ಸೌಖ್ಯಪ್ರದನೆ ನಿಖಿಲಾರ್ಥವಿದನೆ ॥
ಬ್ರಹ್ಮತೇಜನೆ ಭಗವದಂಶಪೂರಿತನೆ।
ಬ್ರಹ್ಮವಿದ್ಯಾ ಸಂಪ್ರದಾಯ ಪಾಲಕನೆ ॥

ನೀನೆ ಮೂಲಾಧಾರನೆಮ್ಮ ಸಂಪದಕೆ।
ನೀನೆ ಮುಖ್ಯಾಚಾರ್ಯನೆಮ್ಮ ಜನಪದಕೆ ॥
ನೀನೆ ನೆಲೆಮನೆಯೆಮ್ಮ ಸದ್ವಿದ್ಯೆಗಳಿಗೆ।
ನೀನೆ ವಿಭುವೆಮ್ಮ ಜೀವಿತ ರಾಜ್ಯಪದಕೆ ॥

ಆದೊಡೇನಕಟೀಗಳೆಮ್ಮ ದುರ್ದಶೆಯುಂ।
ಬಾದರಾಯಣ ದೇವ ಪರಿಕಿಪುದು ಕೃಪೆಯಿಂ ॥

ನೀನಂದು ಬೆಳೆಯಿಸಿದ ಧರ್ಮ ಪಾದಪವು।
ಮ್ಲಾನವೊಂದಿಹುದದರ ಬಲವು ಕುಂದಿಹುದು ॥

ಫುಲ್ಲಸುಮಪಲ್ಲವಗಳಿನಿತದರೊಳಿಲ್ಲ।
ಇಲ್ಲ ಜನಮದರಡಿಯೊಳುಲ್ಲಾಸವಿಲ್ಲ ॥
ಬತ್ತಿಹುದು ಸಲಿಲವಾತರುವಿರುವ ನೆಲದೊಳ್।
ಮುತ್ತಿಹುವು ಕಂಟಕಗಳದನೆಲ್ಲ ಕೆಲದೊಳ್ ॥

ಅಲೆದಾಡುತಿಹುವಲ್ಲಿ ದುಷ್ಟ ಜಂತುಗಳು।
ಸುಳಿಯುತಿಹುವಲ್ಲಿ ವಿಷಭರಿತವಾತಗಳು ॥
ಸಿರಿಯುಗಲಿ ಪತಿಸುತರು ಕೈಯ ಬಿಡೆ ಜರೆಯೊಳ್।
ಕೊರೆ ಕೊರೆದು ಕಂಬನಿಯನಿಡುವ ಮಾನಿನಿವೊಲ್ ॥

ಶ್ರುತಿಜನನಿಯಳಲುತಿರೆ ಚಿಂತೆಯೊಂದದೆ ನೀಂ।
ಸುತರೊಳಾದಿಮನೆನಿಸಿಯುಂ ಚಲಿಸದಿಹುದೇಂ ॥
ಪೌರುಷವ ನೀನಲ್ಲದಾರು ನೀಡುವರು।
ಭೀರುತೆಯ ನೀನಲ್ಲದಾರು ನೀಗುವರು ॥

ನಿನ್ನವರ ನೀನಲ್ಲದಾರು ಕಾಯುವರು।
ಉನ್ನತಿಯನವರು ಮತ್ತಾರಿನೊಂದುವರು ॥
ನಿನ್ನ ವೀಕ್ಷೆಯು ನಿಶಿಯೊಳಾದಿತ್ಯನಂತೆ।
ನಿನ್ನ ನುಡಿ ದೀನಂಗೆ ಧೀರಬಲದಂತೆ ॥

ಬಂದು ನಿನ್ನವರಿಗಭಯವನೀಡು ಗುರುವೇ।
ಮುಂದವರ ಪಥವೆಂತು ತೋರು ವರಕವಿಯೇ ॥
ಚಳಿಯೊಳಿರುಳೊಳಗಲೆವ ಪರದೇಶಿಯಂತೆ।
ಬಳಲಿಹರು ನಿನ್ನಜನರಾಸೆಬಿಟ್ಟಂತೆ ॥

ಬಲವಿತ್ತು ತಿಳಿವಿತ್ತು ವೀರತನವಿತ್ತು।
ಸಲಹುವುದು ನೀನವರ ಸಾಹಸವನಿತ್ತು ॥

ಕೃಪೆಯಿಂದೆ ನೋಡಿ ಕಾಪಾಡುವುದು ದೇವ।
ತಪಿಸುತಿದೆ ಲೋಕವಿದು ವಿಪುಲ ಪ್ರಭಾವ ॥

ತವಕದಿಂ ಬಂದು ನಿನ್ನವರನುದ್ಧರಿಸೈ।
ಭವದೀಯ ಕಾರ್ಯವನು ಬಂದು ಮುಂಬರಿಸೈ ॥
ದೇಶಿಕವರೇಣ್ಯ ನೀನೆನ್ನ ಯೋಜಿಸುತೆ।
ದೇಶದಿಂ ಪೀಡೆಗಳನೆಲ್ಲ ತೊಲಗಿಸುತೆ ॥

ನೀನಕ್ಕರೆಯಿಂಪೂಡಿದಾರ್ಯ ಜನಕುಲಮಂ।
ನಾನೋಲಗಿಸುವಂತೆ ನೀಡು ಸಂಪದಮಂ ॥
ಸಾವಿತ್ರಿಯೊಳಿಗಕೆ ನಾನೊದವುವಂತೆ।
ಸೇವೆಯಿಂ ವೇದಜನನಿಯನೊಲಿಸುವಂತೆ ॥

ಮತಿಯಿತ್ತು ಧೃತಿಯಿತ್ತು ಸಂಗತಿಯನಿತ್ತು।
ಕೃತಕೃತ್ಯನಪ್ಪಂತೆ ವರಬಲವನಿತ್ತು ॥
ಐಕಾಗ್ರ್ಯಮುಳ್ಳ ಪರಿಶುದ್ಧಮನವಿತ್ತು।
ಲೋಕಹಿತ ಯೋಗ್ಯತೆಯನತಿಶಯದೊಳಿತ್ತು ॥

ಸಕಲ ಶಕ್ತ್ಯುಪಪತ್ತಿಗಳನು ನೀಂ ನೀಡಿ।
ಅಕಲಂಕ ವೃತ್ತಿಯಂ ಕರಣದೊಳ್ ಪೂಡಿ ॥
ನಿನ್ನ ಕಾರ್ಯಕ್ಕೆನ್ನನನುಗೊಳಿಸು ಗುರುವೇ।
ಎನ್ನ ಸರ್ವಸ್ವಮಂ ನಿನ್ನಡಿಯೊಳಿಡುವೆ ॥

ಅಂದು ನೀಂ ತೊಳಗಿಸಿದ ಧರ್ಮದೀಪಕ್ಕೆ।
ಇಂದೆನ್ನ ಕೈಯಿಂದೆ ಘೃತಸೇವೆಯಕ್ಕೆ ॥
ಅಂದು ನಿನ್ನಿಂ ಬೆಳೆದ ಧರ್ಮವೃಕ್ಷಕ್ಕೆ।
ಇಂದೆನ್ನ ಕೈಯಿಂದೆ ಜಲಸೇಕಮಕ್ಕೆ ॥

ಅಂದು ನಿನ್ನಿಂದಾದ ಧರ್ಮಹರ್ಮ್ಯಕ್ಕೆ।
ಇಂದೆನ್ನ ಕೈಯಿಂದೆ ಪೆರ್ಗೋಟೆಯಕ್ಕೆ ॥
ಅಂದು ನೀಂ ಪೂಡಿದಾ ಧರ್ಮರಾಷ್ಟ್ರಕ್ಕೆ।
ಇಂದೆನ್ನ ಕೈಯಿಂದೆ ರಿಪುನಷ್ಟಮಕ್ಕೆ ॥

ಯೋಗೀಶ ಕರುಣಿಪುದು ನಿನ್ನ ನಂಬಿರುವೆಂ।
ವಾಗೀಶವುಹಿಮ ನಿನ್ನಡಿಯ ಪಿಡಿದಿರುವೆಂ ॥
ನಾರಾಯಣಾವತಾರನೆ ನಮಸ್ಕರಿಪೆಂ।
ಗೌರೀಶರೂಪ ನಿನ್ನಂಘ್ರಿಯನೆ ಭಜಿಪೆಂ ॥

ಜಯ ಜಯ ಮಹಾತೇಜ ಜಯ ಮೌನಿರಾಜ।
ಜಯ ಜಯ ಮಹೌದಾರ್ಯ ಜಯ ತೋಷಿತಾರ್ಯ ॥
ಜಯ ಮಹೋಜ್ವಲನಾಮ ಜಯ ಸುಗುಣಧಾಮ।
ಜಯ ಜಯ ಜಯ ವ್ಯಾಸ ಜಯ ಚಿದ್ವಿಲಾಸ ॥

[ಪ್ರವೇಶ: ಒಬ್ಬ ವೃದ್ಧ ಬ್ರಾಹ್ಮಣ.]

**ಬ್ರಾಹ್ಮಣ**—. . . ಸ್ವಾಮಿ, (**ಮಾಧವಭಟ್ಟನು ಬೆಚ್ಚಿಬಿದ್ದು ತಿರುಗಿ ನೋಡುವನು.**) ಓಹೊ! ಕ್ಷಮಿಸಬೇಕು. ಏಕಾಂತ ಭಕ್ತಿಯಲ್ಲಿದ್ದಂತೆ ತೋರುತ್ತದೆ; ತಿಳಿಯದೆ ಕೂಗಿದೆ. ವಿಘ್ನವಾಯಿತೇನೋ? ಮನ್ನಿಸ ಬೇಕು.

**ಮಾಧವ**—ವಿಘ್ನವೇನೂ ಇಲ್ಲ. ನನ್ನ ಪೂಜೆಯನ್ನು ಸ್ವೀಕರಿಸುವುದಕ್ಕೆ ವೇದವ್ಯಾಸರೇ ಪ್ರತ್ಯಕ್ಷವಾಗಿ ಬಂದಹಾಗಾಯಿತು. ದಯೆಮಾಡಿ ಈ ಆಸನವನ್ನು ಅಲಂಕರಿಸಬೇಕು.

[**ಬ್ರಾಹ್ಮಣನು ನಗುಮುಖದಿಂದ ಕೂಡುವನು.**

ಈ ಅರ್ಘ್ಯವನ್ನು ತೆಗೆದುಕೊಳ್ಳಬೇಕು. (**ತೆಗೆದುಕೊಳ್ಳುವನು.**) ಈ ಗಂಧವನ್ನು ಸ್ವೀಕರಿಸಬೇಕು. (**ತೆಗೆದುಕೊಳ್ಳುವನು.**) ಈ ಪುಷ್ಪವನ್ನು —ಈ ಫಲತಾಂಬೂಲಗಳನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. (**ಮಾಧವಭಟ್ಟರು ನಮಸ್ಕರಿಸುವರು. ಬ್ರಾಹ್ಮಣನು ತಾಂಬೂಲ ವನ್ನು ತೆಗೆದುಕೊಂಡು ಅಕ್ಷತೆಯನ್ನು ಮಾಧವಭಟ್ಟರ ತಲೆಯ ಮೇಲಿರಿಸುವನು.**)

**ಬ್ರಾಹ್ಮಣ**—ಬ್ರಾಹ್ಮಣರೆ, ತಾವು ಎಲ್ಲಿಂದ ಬಂದವರು? ದಕ್ಷಿಣ ದೇಶದವರೆಂದು ತೋರುತ್ತದೆ.

**ಮಾಧವ**—ಹೌದು; ತುಂಗಭದ್ರಾತೀರದಿಂದ ಬಂದವನು, ಕರ್ಣಾಟಕ ರಾಜ್ಯದಿಂದ.

**ಬ್ರಾಹ್ಮಣ**—ತಾವೇನು ಯಾತ್ರಾರ್ಥಿಗಳಾಗಿ ಬಂದವರೊ, ವಿದ್ವನ್ಮಂಡಲಿಯನ್ನು ನೋಡುವುದಕ್ಕಾಗಿ ಬಂದವರೊ?

**ಮಾಧವ**—ಗಂಗಾಸ್ನಾನಕ್ಕೂ ವಿಶ್ವನಾಥ ಸಂದರ್ಶನಕ್ಕೂ ಬಂದುದು. ಕಾಶಿಗೆ ಬಂದಮೇಲೆ ವಿದ್ವಾಂಸರ ದರ್ಶನವು ಬೇಡವೆನ್ನಿಸುವುದೆ?

**ಬ್ರಾಹ್ಮಣ**—ಅಲ್ಲಿರುವ ಪುಸ್ತಕವಾವುದು?

**ಮಾಧವ**—ಅದರಲ್ಲಿ ಪರಾಶರ ಸ್ಮೃತಿಗೆ ವ್ಯಾಖ್ಯೆಯೊಂದನ್ನು ಯಥಾಶಕ್ತಿ ಬರೆಯೋಣವೆಂದು ಪ್ರಯತ್ನಿಸಿದ್ದೇನೆ. ತೀರ್ಥಯಾತ್ರೆಗಾಗಿ ಸುತ್ತುವಾಗ ಅಲ್ಲಲ್ಲಿ ದೊರೆತ ಅವಕಾಶವನ್ನು ಈ ಕೆಲಸಕ್ಕೆ ವಿನಿಯೋಗಿಸುತ್ತ ಬಂದಿದ್ದೇನೆ. ಅದನ್ನು ಬೇಗ ಸಂಪೂರ್ಣಗೊಳಿಸಲಾಗುವಂತೆ ವರವನ್ನು ಬೇಡಲು ಈ ಮಹಾಸನ್ನಿಧಿಗೆ ಬಂದೆ. ಚೆನ್ನಾಗಿ ಆಶೀರ್ವದಿಸಬೇಕು.

**ಬ್ರಾಹ್ಮಣ**—ಬಹಳ ಸಂತೋಷವಾಯಿತು. ಅದನ್ನಿಲ್ಲಿ ಕೊಡುವಿರಾ? ಒಂದೆರಡು ಓಲೆಗಳನ್ನು ನೋಡಿಕೊಡುವೆನು.

**ಮಾಧವ**—ಆಗಬಹುದು. ಅದೇ ಪರಮಾನುಗ್ರಹ.

[ಪುಸ್ತಕವನ್ನು **ಕೊಡುವನು.**

**ಬ್ರಾಹ್ಮಣ**—(ನಾಲ್ಕಾರು ಓಲೆಗಳನ್ನು ಓದಿನೋಡಿದಂತೆ ಮಾಡಿ) ಸ್ವಾಮಿ, ತಾವು ಇಲ್ಲಿಂದ ಮುಂದೆ ಎಲ್ಲಿಗೆ ಪ್ರಯಾಣ ಬೆಳೆಸಬೇಕೆಂದಿರುವಿರಿ?

**ಮಾಧವ**—ಇನ್ನೂ ಈ ಪ್ರಾಂತವಿರುವ ಕ್ಷೇತ್ರಗಳನ್ನೆಲ್ಲ ನೋಡಿಕೊಂಡು ನಮ್ಮ ದೇಶಕ್ಕೆ ಹಿಂದಿರುಗಬೇಕೆಂದಿದ್ದೇನೆ.

**ಬ್ರಾಹ್ಮಣ**—ನಿಮ್ಮ ದೇಶದಲ್ಲಿ ಈಗ ಮ್ಲೇಚ್ಛ ಬಾಧೆಯು ದುಸ್ಸಹವಾಗಿರುವುದೆಂದು ಕೇಳಿದ್ದೇನೆ.

**ಮಾಧವ**—ಹೌದು; ಅದು ದಿಟ.

**ಬ್ರಾಹ್ಮಣ**—ಇಂತಹ ಕಾಲದಲ್ಲಿ ನೀವು ಅಲ್ಲಿಗೇಕೆ ಹೋಗ ಬೇಕು? ದಯೆಮಾಡಿ ನನ್ನೊಡನೆ ಬರುವಿರಾದರೆ ಒಳ್ಳೆಯ ರಾಜಾಶ್ರಯ ವನ್ನು ಸಂಪಾದಿಸಿಕೊಡುವೆನು.

**ಮಾಧವ**—ಪೂಜ್ಯರೆ, ತಮ್ಮ ವಿಶ್ವಾಸವು ಪ್ರೋತ್ಸಾಹಜನಕ ವಾಗಿದೆ. ಆದರೆ ನಾನು ಧನಕನಕಗಳ ಮೇಲೆ ಮನಸ್ಸಿಟ್ಟುಕೊಂಡು ತಿರುಗುತ್ತಿಲ್ಲ.

**ಬ್ರಾಹ್ಮಣ**—ಹಾಗಲ್ಲ, ಪಂಡಿತರೆ; ನಾನು ಹೇಳುವುದನ್ನು ಲಾಲಿಸಬೇಕು. ತಮ್ಮ ಗ್ರಂಥದ ಭೂಮಿಕೆಯಿಂದಲೇ ಸರಸ್ವತೀ ಪ್ರಸಾದವು ನಿಮ್ಮಲ್ಲಿ ಸಂಪೂರ್ಣವಾಗಿರುವುದೆಂದು ತಿಳಿದು ಬರುತ್ತದೆ. ನಾನು ಅನೇಕ ಮಂದಿ ಪಂಡಿತರನ್ನು ಚೆನ್ನಾಗಿ ಬಲ್ಲೆ. ಇಂತಹ ದೊಡ್ಡ ಕಾರ್ಯವನ್ನು ತಮ್ಮಂತೆ ಮಾಡಬಲ್ಲವರು ಈ ಪ್ರಾಂತ ಯಾರೂ ನನಗೆ ಕಾಣಬಂದಿಲ್ಲ. ತಮಗೆ ಅನುಕೂಲವಾದ ಆಶ್ರಯ ದೊರೆತರೆ ತಾವು ಬೇಕು ಬೇಕಾದಂತೆ ಗ್ರಂಥ ರಚನೆ ಮಾಡಿ ಲೋಕೋಪಕಾರ ಮಾಡಬಹುದಲ್ಲವೆ? ನನ್ನ ಬಿನ್ನಹವನ್ನು ಲಾಲಿಸಿ ನನ್ನೊಡನೆ ಬನ್ನಿರಿ. ಕಾಶ್ಮೀರದ ಮಹಾರಾಜನ ಬಳಿ ಕರೆದುಕೊಂಡು ಹೋಗುವೆನು. ಆತನು ನನ್ನಲ್ಲಿ ಶಿಷ್ಯ ಸಹಜವಾದ ವಿಶ್ವಾಸವನ್ನಿಟ್ಟುಕೊಂಡಿದ್ದಾನೆ. ಆತನು ಉದಾರಿ, ಧರ್ಮಿಷ್ಠ. ವಿದ್ವಾಂಸರಲ್ಲಿ ಆತನಿಗೆ ಅತಿಶಯವಾದ ಭಕ್ತಿ; ಅದರಲ್ಲಿಯೂ ದಕ್ಷಿಣ ದೇಶದವರನ್ನು ಕಂಡರೆ ವಿಶೇಷ ವಾದ ಸಂತೋಷ. ನೀವು ದಯೆಮಾಡಿ ಬಂದರೆ ಆತನು ಬಹು ವಾಗಿ ನಿಮ್ಮನ್ನು ಆದರಿಸಿ ನಿಮಗೆ ಬೇಕಾದ ಸಾಹಾಯ್ಯವನ್ನೆಲ್ಲ ಒದಗಿಸುವನು. ನಿಮ್ಮ ಜನರನ್ನೂ ನೀವು ಅಲ್ಲಿಗೇ ಕರೆಯಿಸಿಕೊಳ್ಳ ಬಹುದು.

**ಮಾಧವ**—ಪೂಜ್ಯರೆ, ನನ್ನಲ್ಲಿ ತಾವು ಅವ್ಯಾಜ ಕೃಪೆಯನ್ನು ತೋರುತ್ತಿರುವಿರಿ. ತಮ್ಮ ಮಾತಿನಂತೆ ನಡೆಯದಿದ್ದರೆ ನಾನು ಕೃತ ಜ್ಞತೆಯಿಲ್ಲದವನಂತೆ ಆಗುವೆನು. ತಮ್ಮ ಮಾತನ್ನು ನಡೆಯಿಸ ಬೇಕಾದರೆ ನನ್ನ ಗುರುಗಳ ಆಜ್ಞೆಯನ್ನು ಮೀರಿ, ಅವರಿಂದ ನಾನು

ಪಡೆದುಕೊಂಡಿರುವ ದೀಕ್ಷೆಯನ್ನು ಬಿಡಬೇಕಾಗುವುದು. ನಾನು ಹೇಗೆ ನಡೆದುಕೊಳ್ಳಬೇಕೋ ಪ್ರಾಜ್ಞರಾದ ತಾವೇ ವಿಧಿಸಬೇಕು.

**ಬ್ರಾಹ್ಮಣ**—ಆ ನಿಮ್ಮ ಗುರುಗಳಾರು? ಅವರು ಕೊಟ್ಟಿರುವ ದೀಕ್ಷೆಯೆಂತಹುದು? ತಿಳಿಸುವಿರಾದರೆ ಕೇಳಲು ಕುತೂಹಲವಾಗಿದೆ.

**ಮಾಧವ**—ದಕ್ಷಿಣದೇಶದಲ್ಲಿ ಕಾಂಚೀ ನಗರದಲ್ಲಿ ಶಾಂಕರ ಧರ್ಮಪೀಠವನ್ನು ಪರಿಪಾಲಿಸುತ್ತಿರುವ ಶ್ರೀ ವಿದ್ಯಾತೀರ್ಥ ಶ್ರೀಚರಣರು ನಮ್ಮ ಗುರುಗಳು. ನಮ್ಮ ದೇಶದಲ್ಲಿ ಖಿಲವಾಗುತ್ತಿರುವ ವೈಧಿಕ ಧರ್ಮವನ್ನು ಊರ್ಜಿತಪಡಿಸಲು ಶಕ್ತಿಯಿದ್ದಂತೆ ಶ್ರಮಪಡಬೇಕೆಂಬುದೇ ನನಗೆ ಅವರು ಕೊಡಿಸಿರುವ ದೀಕ್ಷೆ. ಅದನ್ನು ಹೇಗೆ ಬಿಡಲಿ?

**ಬ್ರಾಹ್ಮಣ**—ಪಂಡಿತರತ್ನವೆ, ನಿಮ್ಮ ಗುರುಗಳ ಕೀರ್ತಿಯು ನನಗೆ ತಿಳಿಯದುದಲ್ಲ. ಅವರ ಮಾತಿನ ಮೇಲೆ ಯಾರ ಮಾತೂ ಇರದು. ಹಿಂದೆ ಕುಮತಗಳು ವಿಜೃಂಭಿಸಿದ್ದಾಗ ನಿಮ್ಮ ದೇಶದಲ್ಲಿ ಅವತರಿಸಿದ ಶಂಕರ ಭಗವತ್ಪಾದರು ವೇದಮತವನ್ನುದ್ಧಾರಮಾಡಿದರು. ಈಗ ನಮ್ಮ ಧರ್ಮಕ್ಕೊದಗಿರುವ ವಿಪತ್ತು ಅವರ ಶಿಷ್ಯಪರಂಪರೆಗೆ ಸೇರಿದ ನಿಮ್ಮ ಕೈಯಿಂದ ಪರಿಹಾರವಾಗುವುದು ಉಚಿತವೇ ಸರಿ. ವಿಶ್ವನಾಥನು ತಕ್ಕ ಶಕ್ತಿಯನ್ನು ನಿಮಗೆ ಅನುಗ್ರಹಿಸಲಿ.

**ಮಾಧವ**—ಪೂಜ್ಯರೆ, ತಮ್ಮ ಆಶೀರ್ವಚನವನ್ನು ಶಿರಸಾ ಧರಿಸಿರುವೆನು. [**ತೆರೆ ಬೀಳುವುದು.**

---

## ಭಾಗ ೨—ಸಂಧಾನ

## ದೃಶ್ಯ ೧

[ಸ್ಥಳ: ಸತ್ಯಮಂಗಲದ ಊರುಮುಂದಿನ ತೋಟ. ವೇಳೆ: ಪ್ರಾತಃಕಾಲ. ಬಾಲಕರಾದ ವೇದಾಚಾರ್ಯ ಪರಾಶರರು ಒಗೆದ ಬಟ್ಟೆಗಳನ್ನು ಹಿಡಿದುಕೊಂಡು ಬರುತ್ತಿರುವರು.]

**ವೇದಾಚಾರ್ಯ**—ಇಲ್ಲಿ ಈ ತುಲಸಿಯ ಗಿಡಗಳನ್ನು ನೋಡಿದೆಯಾ, ತಮ್ಮಾ? ಎಷ್ಟು ಕೋಮಲವಾಗಿ ಬೆಳೆದಿವೆ!

**ಪರಾಶರ**—ಅಣ್ಣಾ, ದಳಗಳನ್ನು ಬಿಡಿಸೋಣವೆ?

**ವೇದಾ**—ಬಿಡಿಸಿ ತೆಗೆದುಕೊಂಡುಹೋಗಿ ಕೊಟ್ಟರೆ ಮಧ್ಯಾಹ್ನದ ಪೂಜೆಗೆ ಅನುಕೂಲಿಸುವುದು.

[ಮಾಧವಭಟ್ಟರ ಪ್ರವೇಶ.]

**ಮಾಧವ**—(ಸ್ವಗತ) ಈ ಬಳಿ ಯಾವುದೋ ಅಗ್ರಹಾರವಿರುವಂತೆ ಕಾಣುತ್ತದೆ. ಈ ಬಾಲಕರನ್ನು ಕೇಳಿ ತಿಳಿಯುವೆನು.

**ಪರಾ**—ಅಣ್ಣಾ, ಈ ಹೊತ್ತು ಯಾವ ಸ್ತೋತ್ರಪಾಠವನ್ನು ಹೇಳೋಣ?

**ವೇದಾ**—ಅಭೀತಿಸ್ತವವನ್ನು ಹೇಳುತ್ತ ತುಳಸಿ ಬಿಡಿಸೋಣ.

[ಇಬ್ಬರೂ ಹೇಳುವರು.]

(ವೃತ್ತ) ಮರುನ್ಮರೀಚಿ ಚಂದ್ರಮರ್ ಸುರೇಶ ಮೃತ್ಯು ಪಾವಕರ್।
ಚರಿಪ್ಪರಲ್ತೆ ವಿಶ್ವದೊಳ್ ಪರೇಶ ನಿನ್ನೊಳಂಜುತುಂ ॥
ಮುರಾದಿ ದೈತ್ಯ ನಾಶದೊಳ್ ಪ್ರಯುಕ್ತಮಾದ ಶಸ್ತ್ರಮುಂ।
ದುರಾತ್ಮರೊಳ್ ತುರುಷ್ಕರೊಳ್ ಪ್ರಯೋಗಿಸಲ್ಕೆ ಬಾರೆಯೇಂ ॥
ದಶಾಸ್ಯಮುಖ್ಯ ದುಷ್ಟರಂ ವಿಶೇಷ ಶೌರ್ಯದಿಂದೆ ಕೊಂ।
ದಶೇಷ ಲೋಕ ಭೀತಿಯಂ ಪ್ರಶಾಂತಗೈದೆಯಲ್ತೆ ನೀಂ ॥

ನಿಶಾಚರಾವತಾರರಂ ತುರುಷ್ಕ ಯಾವನಾದ್ಯರಂ।
ವಿಶೀರ್ಣ ಗೈವುದಿಂದು ನೀಂ ಪ್ರಶಸ್ತ ಕಲ್ಕಿರೂಪದಿಂ ॥

**ಮಾಧವ**—(ಸ್ವಗತ) ಓಹೋ, ಈ ಪ್ರಾಂತ ಯಾರೋ ಪಂಡಿತನೂ ಧರ್ಮಾಭಿಮಾನಿಯೂ ಇರಬೇಕು. ಇಲ್ಲದಿದ್ದರೆ ಇಂತಹ ಕವಿತೆಯು ಹುಟ್ಟೀತೆ?

**ವೇದಾ, ಪರಾ**—

ಕಲಿಪ್ರಚಾರ ದೀಕ್ಷಿತರ್ ತುರುಷ್ಕ ಹೂಣ ಘಾತುಕರ್।
ತ್ರಿಲೋಕ ಪುಣ್ಯಧಾಮುವುಂ ಪ್ರಸಿದ್ಧ ರಂಗಧಾಮುವುಂ ॥
ಛಲಂ ಚಲುಂಕಿ ಪೀಡಿಸಲ್ ವಿಲಾಸಗೊಳ್ವರೇಂ ವಿಭೋ।
ತ್ರಿಲೋಕನಾಥ ತೋರು ನಿನ್ನ ಧರ್ಮರಕ್ಷ ದೀಕ್ಷೆಯುಂ ॥

**ಮಾಧವ**—(ಸ್ವಗತ) ಧರ್ಮಗ್ಲಾನಿಯನ್ನು ಸಹಿಸದೆ ದೇಶದೌರ್ಭಾಗ್ಯಕ್ಕಾಗಿ ಮರುಗುವ ಮಹನೀಯರಾರೋ ಈ ಪ್ರದೇಶದಲ್ಲಿ ಇರಲೇ ಬೇಕು. ಅಂತಹವರ ಸಹಾಯವು ನನ್ನ ಸಂಕಲ್ಪಕ್ಕೆ ಸಾಧಕವಾದೀತಲ್ಲವೆ?

**ವೇದಾ, ಪರಾ**—

ಗದಾ ರಥಾಂಗ ಪಾಂಚಜನ್ಯ ಶಾರ್ಙ್ಗನಂದಕಾದಿಗಳ್।
ತ್ವದೀಯ ದಿವ್ಯ ಶಕ್ತಿಯುಂ ಪ್ರದರ್ಶಿಸಲ್ಕೆ ಬಾರವೇಂ ॥
ಸದಾಶ್ರಯುಂ ದಯಾಮಯುಂ ವಿಜೃಂಭಿಸುತ್ತೆ ದೇವ ನೀಂ।
ವಿದೂರಗೈವುದೀಗಳೀ ವಿದೇಶದುಷ್ಟಜಾಲಮುಂ ॥

**ಮಾಧವ**—(ಪ್ರಕಾಶ) ಆಯುಷ್ಮಂತರೆ, ನೀವಾರು?

**ವೇದಾ**—ನಾವು ದೇಶಿಕರ ಶಿಷ್ಯರು?

**ಮಾಧವ**—(ಸ್ವಗತ) ಬಾಲ್ಯದ ಮಿತ್ರನಾದ ವೇಂಕಟನಾಥನಿರಬಹುದೆ? (ಪ್ರಕಾಶ) ಆ ದೇಶಿಕರೆಂಬುವರು ಯಾರು?

**ವೇದಾ**—ತಿಳಿಯದೆ? ಸರ್ವತಂತ್ರ ಸ್ವತಂತ್ರರೆಂದೂ, ಕವಿತಾರ್ಕಿಕಕೇಸರಿಯೆಂದೂ, ನಿಗಮಾಂತ ಮಹಾಗುರುವೆಂದೂ ವಿಖ್ಯಾತರಾದ ವೇಂಕಟನಾಥಾರ್ಯರಿಗಲ್ಲದೆ ಮತ್ತಾರಿಗೆ ಆ ಹೆಸರು ಸಲ್ಲುವುದು?

**ಮಾಧವ**—ಓಹೊ! ಆನಂದಿತನಾದೆನು.- ಚಿರಂಜೀವರೆ, ನೀವು ಗಾನಮಾಡುತ್ತಿದ್ದ ಪದ್ಯ ರತ್ನಗಳನ್ನು ನಿರ್ಮಿಸಿದವರು ಅವರೇ ಇರ ಬಹುದಲ್ಲವೆ?

**ವೇದಾ**—ಅದಕ್ಕೆ ಸಂದೇಹವೇನು? ಆ ಕವಿತಾ ಧೋರಣಿಯು ಇನ್ನಾರಿಗಿರುವುದು?

**ಮಾಧವ**—ನಾನೇ ಅವರನ್ನು ಹುಡುಕಿಕೊಂಡು ಹೋಗ ಬೇಕೆಂದಿದ್ದೆ. ಈಗ ತಾನಾಗಿಯೇ ಅವರ ದರ್ಶನವು ದೊರೆಯುವಂತಾ ಯಿತು. ಹೀಗಿರುವುದಲ್ಲವೆ ಭಗವಂತನ ಕೃಪೆ? . . . . ನಿಮ್ಮ ಗುರುಗಳು ಈಗ ಎಲ್ಲಿರುವರು?

**ವೇದಾ**—ಬಹುಶಃ ಅವರು ಈ ವೇಳೆಗೆ ಪ್ರಾತರಾಹ್ನಿಕಗಳನ್ನು ಮುಗಿಯಿಸಿಕೊಂಡು ಯಾಯಾವರ ವೃತ್ತಿಗೆ ಹೊರಟಿರಬಹುದು.

**ಮಾಧವ**—(ಸ್ವಗತ) ಆಹಾ, ಮಹಾಪಂಡಿತನಾದ ಈತನೂ ಭಿಕ್ಷಕ್ಕಾಗಿ ಅಲೆಯಬೇಕಾಗಿದೆಯೆ? ಧಾರ್ಮಿಕನಾದ ಪ್ರಭುವಿಲ್ಲದ ದೇಶದಲ್ಲಿ ಮತ್ತೇನಾದೀತು? (ಪ್ರಕಾಶ) ಆಯುಷ್ಮಂತರೆ, ನನ್ನನ್ನು ನಿಮ್ಮ ಗುರುಗಳಿರುವೆಡೆಗೆ ಕರೆದುಕೊಂಡು ಹೋಗುವಿರಾ?

**ವೇದಾ**—ಸಂತೋಷದಿಂದ ಕರೆದುಕೊಂಡು ಹೋಗುವೆವು. ಆದರೆ ತಾವು ಯಾರೋ ತಿಳಿದುಕೊಳ್ಳಲು ಆಶೆಯಾಗಿದೆ.

**ಮಾಧವ**—ನಾನು ನಿಮ್ಮ ಆಚಾರ್ಯರ ಬಾಲ್ಯಸ್ನೇಹಿತ, ಸಹಾಧ್ಯಾಯಿ. ತೀರ್ಥಯಾತ್ರೆ ಮಾಡುತ್ತ ಇಲ್ಲಿಗೆ ಆಗಂತುಕನಾಗಿ ಬಂದೆ. ಈ ಗ್ರಾಮದ ಹೆಸರೇನು?

**ವೇದಾ**—ಸತ್ಯಮಂಗಲ.

**ಮಾಧವ**—ಬಹಳ ಒಳ್ಳೆಯ ಹೆಸರು.

**ವೇದಾ**—ಅದು ಅನ್ವರ್ಥನಾಮವೇ ಸ್ವಾಮಿ.

**ಮಾಧವ**—ಅದು ಹೇಗೆ?

**ವೇದಾ**—ಹೇಗೆನ್ನುವಿರಾ? ಅದೊಂದು ಅದ್ಭುತವಾದ ಕಥೆ. ಶ್ರೀರಂಗವನ್ನು ಮ್ಲೇಚ್ಛರು ಕೊಳ್ಳೆ ಹೊಡೆದ ಸುದ್ದಿಯು ನಿಮಗೆ ತಿಳಿದಿರಬಹುದು. ಅಂದು ನಮ್ಮ ತಾತಪಾದರು ನಮ್ಮಿರ್ವರನ್ನೂ, ತಾವು ಬರೆದಿಟ್ಟಿದ್ದ ಶ್ರುತಪ್ರಕಾಶಿಕೆಯೆಂಬ ಗ್ರಂಥವನ್ನೂ ಸಹ, ಅವರ ಮಿತ್ರರಾದ ದೇಶಿಕರಿಗೆ ಒಪ್ಪಿಸಿಕೊಟ್ಟು, ತಾವು ದಿವ್ಯಕ್ಷೇತ್ರದ ಸಂರಕ್ಷಣೆಗೆ ನಿಂತು, ಯವನ ಖಡ್ಗಾಹತಿಯಿಂದ ದೇಹ ಪರಿತ್ಯಾಗಮಾಡಿ, ಪರಂಧಾಮವನ್ನು ಸೇರಿದರು.

**ಮಾಧವ**—ಆಹಾ! . . . . . ನೀವು ಸುದರ್ಶನಾಚಾರ್ಯರ ಕುವರರೆ?

**ವೇದಾ**—ಆ ಮಹನೀಯರೇ ನಮಗೆ ಜನ್ಮವಿತ್ತವರು.

**ಮಾಧವ**—ಆ ಭಾಗವತ ಶಿರೋಮಣಿಯ ಹೆಸರನ್ನುಳಿಸುವುದಕ್ಕೆ ನಿಮ್ಮಂತಹ ಪುತ್ರರತ್ನಗಳೂ ಆ ಗ್ರಂಥರತ್ನವೂ ನಿಂತಿರುವುದು ಅವರ ಮಿತ್ರರಾದ ನನ್ನಂತಹವರಿಗೆ ಪರಮಸಂತೋಷದ ಸಂಗತಿ. ಆಮೇಲೆ—?

**ವೇದಾ**—ಆಮೇಲೆ ನಮ್ಮ ತಾಯಿಯು ಯಜ್ಞೇಶ್ವರನನ್ನು ಶರಣುಹೊಂದಿ ಆತನ ಕೃಪೆಯಿಂದ ಪತಿಲೋಕವನ್ನೈದಿದಳು.

**ಮಾಧವ**—ಆ ವೈಷ್ಣವಾಗ್ರಣಿಗೆ ಅನುಗುಣಳಾದ ಸಾಧ್ವಿಯಲ್ಲವೆ ಆಕೆ? ಆಮೇಲೆ—?

**ವೇದಾ**—ಆಮೇಲೇನು, ದಿವ್ಯ ದೇಶದಲ್ಲಿ ಸರ್ವನಾಶ!

**ಮಾಧವ**—ನೀವು ಬದುಕಿ ಬಂದುದು ಹೇಗೆ?

**ವೇದಾ**—ಜನನೀಜನಕರು ತಮ್ಮ ಪ್ರಾಣಗಳನ್ನು ಭಗವದರ್ಪಣ ಮಾಡಲುದ್ದೇಶಿಸಿದ ಕೂಡಲೆ, ದೇಶಿಕರು ನಮ್ಮನ್ನು ಕರೆದುಕೊಂಡು ನಡೆದು, ಶ್ರುತಪ್ರಕಾಶಿಕೆಯನ್ನು ಕಾವೇರಿಯ ತಳದ ಮರಳಿನಲ್ಲಿ ಹೂತಿಟ್ಟು, ಯುದ್ಧಕಾಲದಲ್ಲಿ ನಮ್ಮೊಡನೆ ಒಂದು ಹಾಳು ಮಂಟಪದಲ್ಲಿ ಅಡಗಿದ್ದರು. ಆ ಸಾಯಂಕಾಲ ವಿಜಯ ಮದೋನ್ಮತ್ತರಾದ ತುರುಷ್ಕ

ಯೋದ್ಧರು ಮನೆ ಮಂಟಪಗಳೊಳಕ್ಕೆ ನುಗ್ಗಲು, ನಾವು ಹೊರ ಹೊರಟು, ರಣರಂಗದ ಹೆಣಗಳ ನಡುವೆ ಹೆಣಗಳಂತೆ ಅಲುಗಾಡದೆ ಬಿದ್ದಿದ್ದು, ನಾಲ್ಕನೆಯ ಯಾಮ ಹುಟ್ಟಿದ ಬಳಿಕ ಅಲ್ಲಿಂದ ಹೊರಟು, ಶ್ರುತಪ್ರಕಾಶಿಕೆಯನ್ನು ತೆಗೆದುಕೊಂಡು ಈ ಕಡೆ ಬಂದೆವು. ಇಲ್ಲಿ ಸೇರಿದಂದಿನಿಂದ ಇದುವರೆಗೂ ಸುರಕ್ಷಿತರಾಗಿರುವೆವು. ದೇಶಿಕರು ನಮಗೆ ಬ್ರಹ್ಮೋಪದೇಶಮಾಡಿ, ವಿದ್ಯಾಭ್ಯಾಸ ಮಾಡಿಸುತ್ತ, ತಂದೆ ಯಿಲ್ಲದ ದುಃಖವನ್ನು ಮರೆಯಿಸಿರುವರು.

**ಮಾಧವ**—ನಿಮ್ಮ ದೇಶಿಕರು ಮಹಾನುಭಾವರು. ಅವರಲ್ಲಿ ಪ್ರತಿಭೆಗೆ ತಕ್ಕ ಭಕ್ತಿಯೂ, ಪಾಂಡಿತ್ಯಕ್ಕೆ ತಕ್ಕ ಔದಾರ್ಯವೂ ಒಂದ ರೊಡನೊಂದು ಮಿಳಿತವಾಗಿವೆ.

**ವೇದಾ**—ದಯೆಮಾಡಿ ಬನ್ನಿರಿ, ಅವರ ದರ್ಶನವನ್ನು ಮಾಡಿ ಸುವೆವು.

[ತೆರೆ ಬೀಳುವುದು.

---

## ದೃಶ್ಯ ೨

[ಸ್ಥಳ : ವೇಂಕಟನಾಥಾರ್ಯರ ಮನೆ. ಕಾಲ : ಪೂರ್ವಾಹ್ನ.
ಮಾಧವಭಟ್ಟರೂ ವೇಂಕಟನಾಥಾರ್ಯರೂ ಮಾತನಾಡುತ್ತಿರುವರು.]

**ಮಾಧವ**—ಎಷ್ಟೋ ದಿನಗಳಿಂದ ನನಗಿದ್ದ ಕುತೂಹಲವು ಇಂದು ದೈವವಶಾತ್ ಕೈಗೂಡಿದೆ. ನನ್ನಲ್ಲುಂಟಾಗಿರುವ ಸಂಕಲ್ಪವು ನಿನ್ನಂತಹವರ ಸಹಾಯವಿಲ್ಲದೆ ನೆರವೇರುವುದೆ?

**ವೇಂಕಟ**—ಮಾಧವಾರ್ಯ, ನೀನೇ ಧನ್ಯನು. ಧರ್ಮದೇವ ತೆಯು ತಾನಾಗಿ ಬಂದು ನಿನ್ನನ್ನು ತನ್ನ ಸೇವೆಗೆ ಕರೆದುಕೊಂಡಿರು ವಳಲ್ಲಾ. ಅದಲ್ಲವೆ ಪುಣ್ಯ!

**ಮಾಧವ**—ಮಿತ್ರನೆ, ಪ್ರಶಂಸನೀಯನು ನೀನು. ಧರ್ಮ ಚಿಂತೆಯು ನಿನ್ನಲ್ಲಿ ತಾನೇ ಉದಯಿಸಿರುವುದಲ್ಲ. ಈ ಹೊತ್ತು ನಿನ್ನ

ಶಿಷ್ಯರು ಹೇಳುತ್ತಿದ್ದ ಸ್ತೋತ್ರವನ್ನು ಕೇಳಿದ ಬಳಿಕ, ನಿನಗೆ ಧರ್ಮೋತ್ಸಾಹವಿಲ್ಲವೆಂದು ಹೇಳಲಾದೀತೆ?

**ವೇಂಕಟ**—ಅದರಲ್ಲೇನು ವಿಶೇಷ? ಹೃದಯ ಶೂಲೆಯಾದಾಗ ಆರ್ತ ವಚನಗಳು ಹೊರಡುವುದು ಸ್ವಾಭಾವಿಕವೇ ಅಲ್ಲವೆ? ಶ್ರೀರಂಗದಲ್ಲಿ ನಡೆದ ಘೋರ ಕರ್ಮಗಳನ್ನು ಕಂಡಮೇಲೆ ದೇಶಾಂತರದಿಂದ ಬಂದಿರುವ ಪೀಡೆಯು ತೊಲಗಿ ಹೋಗಲೆಂದು ಮೊರೆಯಿಡದವರಾರು?

**ಮಾಧವ**—ನಿನ್ನಂತಹವರು ಮೊರೆಯಿಡುತ್ತಿದ್ದರೆ ಅದು ಸಫಲವಾಗದೆ ಬಹುಕಾಲವಿರದು.

**ವೇಂಕಟ**—ಶ್ರೀಮನ್ನಾರಾಯಣನ ದಯೆ ಎಂದಿಗೆ ಬರುವುದೋ! . . . ಆತನ ದಯೆ ಬರಬೇಕು. ಆಗ ನಮ್ಮ ಪೂರ್ವಪಾಪಗಳ ರಾಶಿಯು ಕರಗಿ ಪಾಪಕರ್ಮಿಗಳಾದ ಯವನರು ನಮ್ಮ ದೇಶದಿಂದ ಓಡುವಂತಾಗಬೇಕು. 'ತೇನ ವಿನಾ ತೃಣಮಪಿ ನ ಚಲತಿ'—ಎಂದು ದೊಡ್ಡವರು ಹೇಳಿರುವರಲ್ಲವೆ?

**ಮಾಧವ**—ಹಾಗಾದರೆ ಪ್ರಕೃತ ನಾವು ಮಾಡಬಹುದಾದುದೇನು?

**ವೇಂಕಟ**—ಶರಣ ಪ್ರಪತ್ತಿಯೊಂದೇ ನಾವು ಮಾಡಬಹುದಾದುದು. ಮೊರೆಯಿಟ್ಟುಕೊಳ್ಳುವುದಕ್ಕೆ ಮಾತ್ರವೇ ನಾವು ಸ್ವತಂತ್ರರು.

**ಮಾಧವ**—ಆದರೆ ಎರಡು ಬಗೆಯಾಗಿ ಮೊರೆಯಿಡಬಹುದಲ್ಲವೆ? ಬಾಯಿಮಾತಿನಿಂದ ಬೇಡಿಕೊಳ್ಳುವಂತೆಯೇ ಕೈಯ ಕೆಲಸದಿಂದಲೂ ಬೇಡಿಕೆಯನ್ನು ಬಿನ್ನಯಿಸಬಹುದಲ್ಲವೆ?

**ವೇಂಕಟ**—ಅದು ನಿನ್ನಂತಹವರಿಂದ ಮಾತ್ರ ಆಗಬಹುದು. ಲೋಕದಲ್ಲಿ ವಚನಶಕ್ತಿ ಕಾರ್ಯಶಕ್ತಿಗಳೆರಡೂ ಒಂದೆಡೆ ಸೇರಿರುವುದು ಸಾಮಾನ್ಯವಲ್ಲ. ನನ್ನಂತೆ ಮಾತಿನವರೇ ಬಹುಮಂದಿ. ನಿನ್ನಂತಹ ಸಾಹಸವಂತರು ವಿರಳರಾಗಿರುವರು.

**ಮಾಧವ**—ಸ್ವಾಭಿಮಾನರಾಹಿತ್ಯವೂ ಪರಪ್ರಶಂಸೋತ್ಸಾಹವೂ ನಿನಗೆ ಹುಟ್ಟುಗುಣಗಳು; ಅದನ್ನು ನಾನರಿಯೆನೆ? . . . . . ಇರಲಿ; ವಿಪತ್ಪರಂಪರೆಯಿಂದ ದೇಶವೆಲ್ಲ ನರಳಿ ನಿಸ್ತೇಜಸ್ಕವಾಗಿರುವಾಗ, ನಾವು ಅರಿಷ್ಟ ಪರಿಹಾರ ಪ್ರಯತ್ನವಾವುದನ್ನೂ ಮಾಡದೆ ಸುಮ್ಮನಿರಲಾಗುವುದೆ?

**ವೇಂಕಟ**—ನನ್ನಂತಹವನು ಏನು ಮಾಡಲಾದೀತು? ನನಗಿರುವುದು ಗುರುಗಳು ಕಲಿಸಿದ ಎರಡಕ್ಷರ.

**ಮಾಧವ**—ಆ ಅಕ್ಷರಧನಕ್ಕಿಂತ ನಮ್ಮ ಜನಕ್ಕೆ ಆಗಬೇಕಾದುದೇನು? ಅದೇ ಜಗದೀಶ್ವರನು ನಮಗೆ ಅನುಗ್ರಹಿಸಿರುವ ಪರಮ ಧನ; ಅದೇ ಮಹರ್ಷಿಗಳು ಶೇಖರಿಸಿಟ್ಟ ಧನ; ಅದೇ ಪೂರ್ವ ಸೂರಿಗಳು ಕಾಪಾಡಿಕೊಟ್ಟಿರುವ ಧನ. ಅದರ ಮಹಿಮೆಯಿಂದಲೇ ದೇಶ ಪೀಡೆಯು ತೊಲಗಬೇಕು.

**ವೇಂಕಟ**—ಅದನ್ನೀಕಾಲದಲ್ಲಿ ಕೇಳುವವರಾರು? ಕ್ಷತ್ರಿಯ ಪ್ರಭುವಿದ್ದರಲ್ಲವೆ ಬ್ರಾಹ್ಮಣ ವಿದ್ಯೆಯ ಬಲ? ಈಗ ಕ್ಷತ್ರಿಯ ಧರ್ಮವೆಲ್ಲದೆ?

**ಮಾಧವ**—ಕ್ಷತ್ರಿಯ ಧರ್ಮವೊಂದರ ಮಾತೇನು? ಎಲ್ಲ ವರ್ಣಾಶ್ರಮ ಧರ್ಮಗಳಿಗೂ ಭಂಗ ಬಂದಿದೆಯಲ್ಲವೆ? ನಿರಂತರವಾಗಿ ನಡೆಯುತ್ತಿರುವ ಜಗಚ್ಚಕ್ರಪರಿಭ್ರಮಣೆಯಿಂದ ಮನುಷ್ಯ ಲೋಕಕ್ಕೆ ರಾತ್ರಿಯೂ ವೃಕ್ಷ ಲೋಕಕ್ಕೆ ಶಿಶಿರರ್ತುವೂ ಬರುವಂತೆ, ಧರ್ಮಕ್ಕೆ ಗ್ಲಾನಿಕರವಾದ ಕಾಲವು ಆಗಾಗ ಬಂದೊದಗುವುದು ಪ್ರಕೃತಿ ಸಿದ್ಧವೇ ತಾನೆ? ಆದರೆ ವ್ಯಾಧಿ ಸಂಭವಿಸಿದಾಗ ವೈದ್ಯನು ಚಿಕಿತ್ಸೆ ನಡೆಯಿಸುವಂತೆ ಜನರು ಧರ್ಮ ಭ್ರಷ್ಟರಾದಾಗ ವಿದ್ವಾಂಸರು ಜ್ಞಾನಪ್ರಸಾರ ಮಾಡಿ ಧರ್ಮವನ್ನುದ್ದೀಪನಗೊಳಿಸಬೇಕು. ವೇಂಕಟನಾಥಾ, ಅದು ನಿನ್ನ ಕೆಲಸ. ವೈದಿಕ ಧರ್ಮದ ಬೀಜವನ್ನು ಕಾಪಾಡಿಡು; ಅದನ್ನು ಬಿತ್ತುವ ಕಾಲವು ಬಾರದೆ ಹೋಗದು.

**ವೇಂಕಟ**—ಹೇಗಾದರೂ ಆಗಲಿ, ನಾನೇನೋ ನನಗೆ ತಿಳಿದುದನ್ನು ಬಂದ ಶಿಷ್ಯರಿಗೆ ಕಲಿಸಿ,ಶ್ರೋತ್ರಿಯ ಸಂಪ್ರದಾಯವನ್ನು ಕಾಪಾಡಿಕೊಂಡು, ಭಗವದಾರಾಧನೆಯಲ್ಲಿ ಆಯುಷ್ಯವನ್ನು ಕಳೆಯಬೇಕೆಂದಿದ್ದೇನೆ. ಆದರೂ ಈಗಿನ ಕಾಲ ವಿಪರ್ಯಯವನ್ನು ನೋಡಿದರೆ ಆರ್ಷೇಯ ಧರ್ಮಗಳು ತಲೆಯೆತ್ತುವ ದಿನವು ನನ್ನ ಜೀವಿತಾವಧಿಯೊಳಗಾಗಿ ಬಂದೀತೆಂಬ ನಿರೀಕ್ಷೆಗೆ ಅವಕಾಶ ತೋರುವುದಿಲ್ಲ.

**ಮಾಧವ**—ನಮಗೆ ನಿರೀಕ್ಷೆಯೂ ಬೇಡ; ನೈರಾಶ್ಯವೂ ಬೇಡ. ಪೂಜ್ಯರಾದ ಪುರಾತನರು ತೋರಿದ ನೀತಿಯ ಮೇಲೆ ದೃಷ್ಟಿಯಿಡೋಣ. ಹಿಂದೆ ಧರ್ಮ ದ್ರುಮವು ಎಷ್ಟೋ ಬಾರಿ ಬಾಡಿದಂತೆ ಕಾಣಲಿಲ್ಲವೆ? ಆಗ ಮಹರ್ಷಿಗಳು ಮಾಡಿದ ಕೃಷಿಯಿಂದ ಅದು ಕಾಂತಿಯೊಂದಲಿಲ್ಲವೆ? ದುಷ್ಟರು ಅದನ್ನು ಕಡಿಯಲು ಎಷ್ಟೋ ಬಾರಿ ಕೊಡಲಿಯನ್ನು ತರಲಿಲ್ಲವೆ? ಅಂತಹವರೆಲ್ಲ ನಮ್ಮ ಪೂರ್ವಾಚಾರ್ಯರುಗಳ ಮಹಿಮೆಯಿಂದ ಭಗ್ನಾಯುಧರಾಗಿ ಹಿಂದಿರುಗಲಿಲ್ಲವೆ? ವೇಂಕಟನಾಥ,

(ಕಂದ) ಸರಹೃದಯ ಗುಹಾಂತದೊಳನ।
ವರತಂ ನೆಲಸಿರ್ಕುವೊಂದು ಧರ್ಮಾಗ್ನಿಕಣಂ ॥
ಗುರುವಾಗನಿಲಂ ಭಸ್ಮಾ।
ವರಣವ ಕಳೆದೊಯ್ಯಲಾಗಳದು ಸಂಜ್ವಲಿಕುಂ ॥

ನೀನು ಅಂತಹ ಗುರುವಾಗಬೇಕಾದವನು. ಧರ್ಮ ಜ್ಯೋತಿಯು ತಾನಾಗಿಯೇ, ನಮ್ಮ ಉಪಚಾರವಿಲ್ಲದೆಯೇ, ಎಂದೆಂದೂ ಒಂದೇ ವಿಧವಾಗಿ ಬೆಳಗುತ್ತಿರುವುದಾದರೆ, ಲೋಕದವರ ಪುಣ್ಯಪಾಪಗಳೆಂಬುವೇನು? ಪಂಡಿತರೆಂಬುದೇನು? ಅಪಂಡಿತರೆಂಬುದೇನು? ಋತುಚಕ್ರಪರಿವರ್ತನೆಯನ್ನನುಸರಿಸಿ ನಮ್ಮ ಆಹಾರ ವಸ್ತ್ರ ರೀತಿಗಳು ವ್ಯತ್ಯಸಿಸುವ ತೆರದಲ್ಲಿ ಕಾಲಚಕ್ರಪರಿವರ್ತನಾನುಸಾರವಾಗಿ ನಮ್ಮ ಧರ್ಮಕರ್ಮಗಳೂ ರೂಪ ವ್ಯತ್ಯಾಸವನ್ನು ಪಡೆಯಬೇಕಾಗಬಹುದು. ಈಗ ಅಂತಹ ವಿವರ್ತನೆಯ ಸಮಯವೆಂದು ನಾನು ತಿಳಿದುಕೊಂಡಿದ್ದೇನೆ.

ಮಿತ್ರವರ್ಯ, ಇದುವರೆಗೂ ಸ್ಮಾರ್ತ ವ್ಯವಸ್ಥೆಯು ಸಜ್ಜನವಂಶದಂತೆ ಬೆಳೆಯುತ್ತ ಬಂದಿದೆ. ಪೂರ್ವ ಪುರುಷರು ಹೂಡಿದ ಗೃಹಾರಾಮಗಳನ್ನು ಪುತ್ರ ಪೌತ್ರರು ಕಾಲೋಚಿತವಾಗಿ ವಿಸ್ತರಿಸಿಕೊಂಡು ಬರುವಂತೆ, ಮನುಪ್ರತಿಷ್ಠಿತವಾದ ಧರ್ಮವನ್ನು ಯಾಜ್ಞವಲ್ಕ್ಯ ಪರಾಶರ ಬಾದರಾಯಣ ಪ್ರಭೃತಿಗಳು ಪರಿಪಾಲಿಸಿ ಬೆಳೆಯಿಸಿದರು. ನಮ್ಮ ಕಾಲದಲ್ಲಿಯೂ ಅದು ವಿಸ್ತೃತವಾಗಿ ಬೆಳೆಯಬೇಕಲ್ಲವೆ? ಅದು ನಿನಗೆ ಸೇರಿದ ಕೆಲಸವಲ್ಲವೆ?

**ವೇಂಕಟ**—ಮಾಧವಣ್ಣ, ನಿನ್ನ ವಿಶ್ವಾಸ ದೊಡ್ಡದು. ಆದರೆ ನಾನು ಅಷ್ಟು ದೊಡ್ಡವನೆ? ನನ್ನ ಕೈಯಿಂದಾಗುವುದನ್ನು ಮಾಡಲು ಸಿದ್ಧನಾಗಿಯೇ ಇರುವೆನು. ನಾನೂ ಸಾಮಾನ್ಯ ಜನ ಬೋಧೆಗಾಗಿ ಸಂಸ್ಕೃತದಲ್ಲೊಂದೆರಡು ಪ್ರಬಂಧಗಳನ್ನು ಬರೆದಿದ್ದೇನೆ. ದೇಶಭಾಷೆಯಲ್ಲೊಂದೆರಡನ್ನು ಬರೆಯಬೇಕೆಂದಿದ್ದೇನೆ. ಆದರೆ ಪ್ರಜಾಸಂಕ್ಷೋಭೆಯು ಹೀಗಿರುವಾಗ ಏನು ಮಾಡುವುದಕ್ಕೂ ಉತ್ಸಾಹ ಬಾರದು. ಮೊದಲು ಸ್ಮಾರ್ತಲೋಕಾಭಿಮಾನಿಯಾದ ರಾಜನೊಬ್ಬನು ಹುಟ್ಟಿಕೊಳ್ಳಬೇಕು. ಅವನು ಈ ವಿಪ್ಲವವನ್ನು ಪರಿಹರಿಸಿ ದೇಶವನ್ನು ನಿರುಪದ್ರವವನ್ನಾಗಿ ಮಾಡಬೇಕು. ಆಮೇಲೆ ವೇದವಿದ್ಯಾಭಿವೃದ್ಧಿಗೆ ದಾರಿ ತೋರಬಹುದು.

**ಮಾಧವ**—ಅಂತಹ ರಾಜನೊಬ್ಬನನ್ನು ಹುಡುಕಿ, ಅವನ ಕೈಯಿಂದ ಆ ಕೆಲಸವನ್ನು ಮಾಡಿಸುವುದೂ ಬ್ರಾಹ್ಮಣರಾದ ನಮ್ಮ ಕರ್ತವ್ಯವೆಂದು ನಾನು ಭಾವಿಸಿದ್ದೇನೆ. ಬ್ರಹ್ಮತೇಜೋಬಲದಿಂದ ಕ್ಷತ್ರಧರ್ಮವನ್ನು ಉಜ್ಜೀವಿತಮಾಡಲಾಗುವುದಿಲ್ಲವೆ?

(ಕಂದ) ಘರ್ಮಮುಮೋಜಮುಮಾ ರವಿ।
ಧರ್ಮದೊಳೊಂದಾಗಿ ಜಗವ ಸಲಪುವ ತೆರದಿಂ ॥
ವರ್ಮಧರ ವಿಪ್ರರಿರ್ವರ।
ಧರ್ಮಗಳೊಂದಾಗಿ ಜನವ ಸಲಪುಗುಮಲ್ತೇ ॥

**ವೇಂಕಟ**—ಒಪ್ಪಿದೆ. ಆದರೆ ಅಂತಹ ಸಂಧಾನವನ್ನು ಕಲ್ಪಿಸ ಬಲ್ಲ ಚತುರತೆಯು ನನಗಿಲ್ಲ. ಅದಕ್ಕೆ ತಕ್ಕ ಗುಣ ಶಕ್ತಿಗಳು ನಿನ್ನಲ್ಲಿ ಸೇರಿರುವಂತೆ ಮತ್ತೆಲ್ಲಿದ್ದಾವು? ಗಾಯತ್ರೀ ದೇವಿಯು ತೋರಿರುವ ಅನುಗ್ರಹವೇ ಅದಕ್ಕೆ ಪ್ರಮಾಣ.

**ಮಾಧವ**—ಅದು ಆಕೆಯ ಅನುಗ್ರಹವೋ, ಪರೀಕ್ಷೆಯೋ, ವಿಲಾಸವೋ—ಯಾವುದನ್ನೂ ತಿಳಿಯಲಾರದವನಾಗಿದ್ದೇನೆ. ಸದ್ಯಃ ಗುರುವರ್ಯರಾದ ವಿದ್ಯಾತೀರ್ಥ ಶ್ರೀಚರಣರು ಮಾತ್ರ ನನ್ನನ್ನು ಪ್ರೋತ್ಸಾಹಿಸಿ, ದೇವಿಯ ಆಜ್ಞೆಯು ನೆರವೇರುವ ಕಾಲವು ಬರುವುದೆಂದೂ, ಆಕೆಯೇ ದಾರಿ ತೋರುವಳೆಂದೂ ಅಭಯ ಹೇಳಿದ್ದಾರೆ. ಅವರ ಅಪ್ಪಣೆಯಂತೆ ನಾನು ಮಹಾಯಾತ್ರೆ ಮಾಡಿಕೊಂಡು ಅವರ ಸನ್ನಿಧಿಗೇ ಈಗ ಹಿಂದಿರುಗುತ್ತಿದ್ದೇನೆ. ಮುಂದೆ ಅವರ ಉಪದೇಶವೂ ದೇವಿಯ ಪ್ರೇರಣೆಯೂ ಹೇಗಾದರೆ ಹಾಗೆ ನಡೆಯಲು ಸಿದ್ಧನಾಗಿ ರುವೆನು.

**ವೇಂಕಟ**—ಮಾಧವಣ್ಣ, ವಿದ್ಯಾತೀರ್ಥರಿಗಿಂತ ಉತ್ತಮವಾದ ಆಶ್ರಯವು ನಿನಗೆ ಈ ಲೋಕದಲ್ಲಿ ಎಲ್ಲಿ ಎಂದಿಗೆ ದೊರೆಯುವುದು?

(ಕಂದ) ನರಮಾತ್ರನಾದ ಗುರು ತಾ।
ನೊರೆವಂ ಮಂತ್ರಾಕ್ಷರಂಗಳಂ ಶ್ರೋತ್ರಗಳೊಳ್ ॥
ಪರದೈವವಿತ್ತ ಗುರು ತಾಂ।
ಬರೆವನದಂ ಶಿಷ್ಯ ಹೃದಯಫಲಕದಿ ದೃಢದಿಂ ॥

ಇಂತಹ ಮಹಾಮಹಿಮರಲ್ಲವೆ ವಿದ್ಯಾತೀರ್ಥರು? ಅವರ ಆಶೀರ್ವಾದ ಪ್ರಭಾವದಿಂದಲೇ ದೇವಿಯ ಕಟಾಕ್ಷಕ್ಕೂ ನೀನು ಪಾತ್ರ ನಾದೆ. ಅವರ ಬಲವಿರುವಾಗ ಸಂಕಲ್ಪ ಸಿದ್ಧಿಗೆ ತಡೆಯೇನಾದೀತು?

**ಮಾಧವ**—ಮಿತ್ರ ರತ್ನವೆ, ನಾನಿನ್ನು ಹೋಗಿಬರಲೆ? ಬಹು ಕಾಲದ ಮೇಲೆ ಯಾದೃಚ್ಛಿಕವಾಗಿ ಈ ನಿನ್ನ ದರ್ಶನದ ಸುಖವು ಲಭಿಸಿರು ವುದೇ ನನಗೆ ಒಂದು ಶುಭ ಶಕುನ. ಇನ್ನು ಮುಂದಿನ ಹಾದಿಯಮೇಲೆ

ಮನಸ್ಸು ಬಿದ್ದಿದೆ. ಭಗವದನುಗ್ರಹದಿಂದ ಸ್ವಲ್ಪ ಕಾಲದಲ್ಲಿಯೇ ನಾವು ಪುನಃ ಸೇರುವಂತಾಗಲಿ.

**ವೇಂಕಟ**—ಈ ಸನ್ನಿವೇಶದ ಸಂತೋಷವು ನನಗೆ ಇಮ್ಮಡಿಯಾಗಿದೆ. ಹಳೆಯ ಸ್ನೇಹಿತನನ್ನು ನೋಡಿದುದಲ್ಲದೆ ಹೊಸ ಶುಭವಾರ್ತೆಯೊಂದನ್ನೂ ಕೇಳಿದುದಾಯಿತು. ಮಾಧವಾರ್ಯ, ನಿನ್ನ ಹಾರೈಕೆಯನ್ನು ರಂಗನಾಥನು ನಡೆಸಿಕೊಡಲಿ. ಪ್ರಜಾ ಸಂಕ್ಷೋಭೆಯನ್ನು ಪರಿಹರಿಸಿ ವರ್ಣಾಶ್ರಮ ಧರ್ಮಗಳನ್ನು ನಿಲ್ಲಿಸುವ ಪ್ರಯತ್ನಕ್ಕೆ ನೀನು ಅಧಿಕಾರಿ. ನಿನ್ನ ಪ್ರಯತ್ನಗಳು ಸಫಲವಾಗಲೆಂದು ಮೊರೆಯಿಡುವುದಕ್ಕೆ ನಾನು ಅಧಿಕಾರಿ. ಹೋಗಿ ಬರುವೆಯಾ?

[ತೆರೆ ಬೀಳುವುದು.

---

## ದೃಶ್ಯ ೩

[ಸ್ಥಳ: ಆನೆಗೊಂದಿಯಲ್ಲಿ ಒಂದು ಮನೆ. ಪ್ರವೇಶ : ಸೋಮಶೇಖರ ರಾಮಕೃಷ್ಣರೆಂಬ ಬ್ರಾಹ್ಮಣ ಯುವಕರು.]

**ರಾಮಕೃಷ್ಣ**—ಸೋಮಶೇಖರಾ, ಮೊನ್ನೆ ನೀನು ನಿಮ್ಮ ಗುರುಗಳೊಡನೆ ಹಂಪೆಗೆ ಹೋಗಿದ್ದೆಯೆಂದು ಕೇಳಿದೆ. ಏನು ಅಲ್ಲಿಯ ಸಮಾಚಾರ?

**ಸೋಮಶೇಖರ**—ಹೆಚ್ಚು ಸಮಾಚಾರವೇನೂ ಕಾಣೆ. ಪಂಪಾಪತಿಯ ದರ್ಶನಮಾಡಿ ಬಹಳ ದಿನವಾಗಿತ್ತು; ಸೇವೆಮಾಡಿ ಬರೋಣವೆಂದು ಆಶೆಯಾಯಿತು; ಅದಕ್ಕಾಗಿ ಅವರ ಹಿಂದೆ ಹೋಗಿದ್ದೆ; ಅಷ್ಟೆ.

**ರಾಮ**—ಅದು ಸರಿ. ಅಲ್ಲಿ ಏನು ವಿಶೇಷ?

**ಸೋಮ**—ವಿಶೇಷವೇನು? ಬೆಟ್ಟ ಬೆಟ್ಟವಾಗಿದೆ; ನದಿ ನದಿಯಾಗಿಯೇ ಇದೆ; ಕಾಡು ಕಾಡೇ ಆಗಿದೆ.

**ರಾಮ**—ಅದೆಲ್ಲಾ ಇರಲಿ. ಈಚೆಗೆ ಯಾರೋ ಯತಿಗಳು ಅಲ್ಲಿ ಆಶ್ರಮ ಮಾಡಿಕೊಂಡಿರುವರಂತಲ್ಲ. ಅವರನ್ನು ನೋಡಿದ್ದೆಯಾ?

**ಸೋಮ**—ಅಂಥ ಪುಣ್ಯಸ್ಥಳಕ್ಕೆ ಹೋದಮೇಲೆ ಅಲ್ಲಿರುವ ಮಹಾತ್ಮರನ್ನು ನೋಡದೆ ಯಾರಾದರೂ ಬರುವರೆ?

**ರಾಮ**—ಹಾಗಾದರೆ ಅವರ ವೃತ್ತಾಂತವೇನು?

**ಸೋಮ**—ರಾಮಕೃಷ್ಣ, ಆ ಮಾತನ್ನು ಮಾತ್ರ ಕೇಳಬೇಡ.

**ರಾಮ**—ಅದೇತಕ್ಕೆ ಕೇಳಕೂಡದು?

**ಸೋಮ**—ಅದು ದೊಡ್ಡವರ ವಿಷಯ. ಅದನ್ನು ಕುರಿತು ಸಿಕ್ಕಿ ಸಿಕ್ಕಿದವರೊಡನೆ ಮಾತನಾಡುವುದಿಲ್ಲವೆಂದು ಭಾಷೆ ಕೊಟ್ಟಿದ್ದೇನೆ.

**ರಾಮ**—ಸೋಮಶೇಖರಾ, ನಾನು ನಿನಗೆ ಸಿಕ್ಕಿ ಸಿಕ್ಕಿದವನಾದೆನೆ? ನನ್ನನ್ನು ನೀನು ಬಾಲ್ಯದಿಂದ ಕಾಣೆಯಾ? ನನ್ನ ಅಂತರಂಗವನ್ನು ನಿನಗೆ ಎಷ್ಟೋ ಸಲ ಬಿಚ್ಚಿ ಹೇಳಿಲ್ಲವೆ? ನೀನು ಹೇಳಿದುದನ್ನು ನಾನೇನು ಡಂಗುರ ಹೊಯಿಸುವೆನೆ?

**ಸೋಮ**—ಹಾಗಲ್ಲ, ರಾಮಕೃಷ್ಣ; ದೊಡ್ಡವರ ಮಾತು ಚಿಕ್ಕವರ ಬಾಯಿಗೆ ಬಿದ್ದರೆ ಅನರ್ಥಕ್ಕೆ ದಾರಿಯಾಗಬಹುದು. ಇಷ್ಟಕ್ಕೂ ಆ ವಿಷಯವನ್ನು ನೀನು ತಿಳಿದುಕೊಳ್ಳದಿದ್ದರೆ ನಿಂತುಹೋಗುವುದೇನು?

**ರಾಮ**—ಸೋಮಶೇಖರಾ, ನಾನೇನು ಅಧಿಕಪ್ರಸಂಗಿತನದಿಂದ ನಿನ್ನನ್ನು ಕೇಳಿಕೊಳ್ಳುತ್ತಿಲ್ಲ. ನನ್ನ ಮನಸ್ಸಿನಲ್ಲಿ ಒಂದು ಆಲೋಚನೆ ಹುಟ್ಟಿದೆ. ಅದು ಸಫಲವಾಗಬೇಕಾದರೆ ನೀನು ಆ ವಿಷಯವನ್ನು ನನಗೆ ಹೇಳಬೇಕು. ಅದು ನನ್ನ ಉದ್ದೇಶಕ್ಕೆ ಅನುಕೂಲವಾಗುವುದಾಗಿದ್ದರೆ ಸರಿ; ಇಲ್ಲವಾದರೆ ನೀನು ಹೇಳಿದುದನ್ನು ಇಲ್ಲಿಯೇ ಮರೆತುಬಿಟ್ಟೆನೆಂದು ತಿಳಿದುಕೋ. ಸಂದೇಹಪಡಬೇಡ.

**ಸೋಮ**—ನಿನ್ನ ಉದ್ದೇಶವೇನು? ಮೊದಲು ಹೇಳು; ನೋಡೋಣ.

**ರಾಮ**—ಸಂತೋಷದಿಂದ ಹೇಳುತ್ತೇನೆ, ಕೇಳು: ಈಗ ಹಂಪೆಯಲ್ಲಿ ತಪಸ್ಸುಮಾಡಿಕೊಂಡಿರುವ ಯತಿಗಳು ಯಾರೋ ಘನಪಂಡಿತರಂತೆ; ಬಹುಕಾಲ ಯೋಗಾಭ್ಯಾಸ ಮಾಡಿದವರಂತೆ. ಅವರ ಶುಶ್ರೂಷೆ

ಮಾಡಿ ವಿದ್ಯೆ ಕಲಿಯಬೇಕೆಂದು ನನಗೆ ಆಶೆ ಹುಟ್ಟಿದೆ. ನಿನ್ನ ಸಹಾಯ ದಿಂದ ಅದು ಕೈಗೂಡಬೇಕು.

**ಸೋಮ**—ನೀನು ಇಷ್ಟು ಹೇಳಿಕೊಂಡಮೇಲೆ ನನಗೆ ತಿಳಿದು ದನ್ನು ನಾನು ಮರೆಮಾಚಲಾಗುವುದಿಲ್ಲ. ಪೂರ್ವಾಶ್ರಮದಲ್ಲಿ ಆ ಯತಿ ಗಳು ನಮ್ಮ ಗುರುಗಳಾಗಿರುವ ಸಾಯಣಾಚಾರ್ಯರಿಗೆ ಅಣ್ಣಂದಿರು. ಅವರನ್ನು ಆಗ ಮಾಧವಭಟ್ಟರು, ಮಾಧವಾಚಾರ್ಯರು ಎಂದು ಕರೆಯುತ್ತಿದ್ದರು. ಈಗ ಅವರಿಗೆ ವಿದ್ಯಾರಣ್ಯರೆಂದು ಹೆಸರು; ಅದು ಅವರ ಯೋಗ್ಯತೆಗೆ ತಕ್ಕ ಹೆಸರೇ ಸರಿ. ಅವರು ಸಕಲ ಶಾಸ್ತ್ರ ಪಾರಂ ಗತರು; ಅನೇಕ ಗ್ರಂಥಗಳನ್ನು ಬರೆದವರು; ಹಿಮವತ್ಪರ್ವತದಿಂದ ರಾಮ ಸೇತುವಿನವರೆಗೂ ತೀರ್ಥಯಾತ್ರೆ ಮಾಡಿ, ಅನೇಕ ದೇಶಗಳನ್ನು ನೋಡಿ, ಬಹುಮಂದಿ ಮಹನೀಯರನ್ನು ಕಂಡವರು. ಕಂಚಿಯ ವಿದ್ಯಾತೀರ್ಥ ಸ್ವಾಮಿಗಳು ಅವರ ಮುಖ್ಯ ಗುರುಗಳು; ಶೃಂಗೇರಿಯ ಭಾರತೀತೀರ್ಥ ಸ್ವಾಮಿಗಳು ಅವರಿಗೆ ಸಂನ್ಯಾಸ ಕೊಟ್ಟವರು. ಅವರ ವಯಸ್ಸು ಅರವತ್ತು ಸಂವತ್ಸರಗಳನ್ನು ಮೀರಿದ್ದರೂ ಯೋಗಬಲದಿಂದ ಅವರು ಮೂವತ್ತು ವರ್ಷದವನ ದೃಢಕಾಯತೆಯನ್ನು ಪಡೆದಿರುವರು. ಅವರು ಮನಸ್ಸಿನಲ್ಲಿ ಯಾವುದೋ ಒಂದು ದೊಡ್ಡ ಸಂಕಲ್ಪವನ್ನಿಟ್ಟುಕೊಂಡು ತಪಸ್ಸು ಮಾಡುತ್ತಿರುವರಂತೆ. ದಂಡನಾಯಕ ಹರಿಯಣ್ಣನು ಅವರ ಪ್ರಿಯ ಶಿಷ್ಯ. ಆತನು ಪ್ರತಿದಿನವೂ ಅವರಿಗೆ ಹಾಲು ಹಣ್ಣುಗಳನ್ನು ಕಳುಹಿಸಿಕೊಡುತ್ತಿದ್ದಾನೆ. ಆಗಾಗ ಆತನು ಹೋಗಿ ಅವರ ದರ್ಶನ ಮಾಡಿ ಆಶೀರ್ವಾದ ಪಡೆದುಕೊಂಡು ಬರುತ್ತಾನೆ. ಇದೇ ನಾನು ಕೇಳಿರುವ ವೃತ್ತಾಂತ. ಇದನ್ನು ನೀನು ಬೀದಿಯಲ್ಲೆಲ್ಲ ಹರಡದೆ, ಯುಕ್ತ ತೋರಿದಂತೆ ಮಾಡು.

**ರಾಮ**—ಸೋಮಶೇಖರಾ, ನಿನ್ನಿಂದ ಈಗ ಮಹೋಪಕಾರ ವಾಯಿತು; ಆದರೆ ಇಷ್ಟು ಹೇಳಿದುದು ಸಾಲದು. ನನ್ನನ್ನು ನಿಮ್ಮ ಗುರುಗಳ ಬಳಿಗೆ ಕರೆದುಕೊಂಡು ಹೋಗಿ, ಅವರೇ ವಿದ್ಯಾರಣ್ಯ ಸ್ವಾಮಿಗಳ ಕೃಪೆಯನ್ನು ನನಗೆ ದೊರಕಿಸಿಕೊಡಬೇಕೆಂದು ಬೇಡಿ ಕೊಳ್ಳಬೇಕು.

**ಸೋಮ**—ಬಾ ರಾಮಕೃಷ್ಣ, ಹೋಗೋಣ. ಅಂತಹವರಿಗೆ ಶಿಷ್ಯನಾಗುವ ಭಾಗ್ಯವು ನಿನ್ನಂತಹವನಿಗಲ್ಲದೆ ಯಾರಿಗೆ ದೊರೆಯಬೇಕು? ನಮ್ಮ ಗುರುಗಳಿಗೆ ಬಾಹ್ಯಸಂಪತ್ತು ಇಲ್ಲದಿದ್ದರೂ ಅಂತಃಕರಣ ಸಂಪತ್ತು ಅಪರಿಮಿತವಾಗಿರುವುದು. ಅವರಲ್ಲಿ ಬೇಡಿದ ಬೇಡಿಕೆಯು ಬರಿದಾಗಿ ಹೋಗದು. ಬಾ.

[ತೆರೆ ಬೀಳುವುದು.

---

## ದೃಶ್ಯ ೪

[ಸ್ಥಾನ: ತುಂಗಭದ್ರಾತೀರ. ವೇಳೆ: ಸೂರ್ಯೋದಯಾನಂತರ. ಪ್ರವೇಶ: ಹರಿಹರ, ಕೈಯಲ್ಲಿ ಹಣ್ಣುಗಳ ಬುಟ್ಟಿಯನ್ನೂ ಹಾಲಿನ ಪಾತ್ರೆಯನ್ನೂ ಹಿಡಿದುಕೊಂಡಿರುವನು.]

**ಹರಿಹರ**—(ಒಂದು ಬಂಡೆಯಮೇಲೆ ಕುಳಿತು) ....ಮನುಷ್ಯನೆಂದರೆ ಏನು—ನೆಲದಮೇಲಿನ ಮೋಡ, ಅಷ್ಟೇ ಅಲ್ಲವೆ? ಆಕಾಶದ ಮೋಡವು ಒಂದು ಗಳಿಗೆ ಪರ್ವತಾಕಾರವಾಗಿ ಬೆಳೆಯುತ್ತದೆ; ಇನ್ನೊಂದು ಗಳಿಗೆ ಅಂಗೈಯಗಲವಾಗುತ್ತದೆ; ಒಂದು ಗಳಿಗೆ ಆನೆಯ ಹಿಂಡಿನಂತೆ ಓಡುತ್ತಿರುತ್ತದೆ; ಮತ್ತೊಂದು ಗಳಿಗೆ ಮೊಲದಂತೆ ಮೈ ಮುದುರಿಕೊಂಡಿರುತ್ತದೆ. ಗಾಳಿ ಬೀಸಿದಂತೆಲ್ಲ ಅದರ ರೂಪವೂ ರೀತಿಯೂ ಬೇರೆಯಾಗುತ್ತವೆ. ಮನುಷ್ಯನ ಬಾಳೂ ಹಾಗೆಯೇ; ಸಂದರ್ಭಗಳು ವ್ಯತ್ಯಾಸವಾದಹಾಗೆಲ್ಲ ಅವನ ಆಕಾರವೂ ನಡತೆಯೂ ವ್ಯತ್ಯಾಸಗೊಳ್ಳುತ್ತವೆ. ಹಿಂದೆ ತಂದೆಯ ಕಾಲದಲ್ಲಿ ರಾಜಕುಮಾರರೆನ್ನಿಸಿಕೊಂಡು ಮೆರೆಯುತ್ತಿದ್ದೆವು. ಈಗ ಪರರಾಜಾಶ್ರಯದಲ್ಲಿ ದುಡಿದು ಹೊಟ್ಟೆ ಹೊರೆದುಕೊಳ್ಳಬೇಕಾಗಿದೆ. ಇನ್ನೂ ಮುಂದೆ ಮುಂದೆ ಹೇಗೆ ಹೇಗೆ ಇರಬೇಕಾಗುವುದೋ .... ಒಳ್ಳೆಯ ಕಾಲ ಬರುವುದೆಂದು ಗುರುಗಳೇನೋ ಆಗಾಗ ಹೇಳುತ್ತಿರುವರು. ಅದು ಎಂದಿಗೋ! ಏನಾದರಾಗಲಿ. ಅವರೇ ನಮ್ಮ ಪಾಲಿನ ದೈವ....ಯಾರೋ ಬರುತ್ತಿರುವಂತಿದೆ. (ತಿರುಗಿ ನೋಡಿ) ಓಹೋ, ರಾಮಕೃಷ್ಣಶಾಸ್ತ್ರಿಗಳು.

[ಪ್ರವೇಶ: ಒಗೆದ ಕಾವಿಯುಬಟ್ಟೆಗಳನ್ನು ಹಿಡಿದುಕೊಂಡ ರಾಮಕೃಷ್ಣನು.
ಶಾಸ್ತ್ರಿಗಳ ಪಾದಕ್ಕೆ ನಮಸ್ಕಾರ.

**ರಾಮಕೃಷ್ಣ**—ಓಹೋ! ಹರಿಯಪ್ಪೊಡೆಯರವರೆ? ಶುಭವಾಗಲಿ. ಇದೇನು, ಇಷ್ಟು ತ್ವರೆಯಿಂದ ಈ ಪ್ರಾಂತ ಬಿಜಮಾಡಿಸಿರುವುದಾಗಿದೆ?

**ಹರಿ**—ಗುರುಗಳನ್ನು ನೋಡೋಣವೆಂದು ಬಂದೆ; ಮತ್ತೇನೂ ಇಲ್ಲ; ಆಶ್ರಮದಲ್ಲಿರುವರೆ?

**ರಾಮ**—ಸ್ನಾನಕ್ಕೆ ಹೋಗಿದ್ದಾರೆ. ಇನ್ನೇನು ಬರುವ ಹೊತ್ತಾಯಿತು. ನೀವೆಲ್ಲ ಕ್ಷೇಮಿಗಳಷ್ಟೆ?

**ಹರಿ**—ಗುರು ಕೃಪೆಯಿಂದ ಎಲ್ಲರೂ ಇದುವರೆಗೂ ಕ್ಷೇಮದಿಂದಿದ್ದೇವೆ. . . . . . ನಿನ್ನೆ ರಾತ್ರಿ ಏನೋ ಚಿಂತಿಸುತ್ತಿದ್ದಾಗ ಗುರು ದರ್ಶನ ಮಾಡಬೇಕೆಂದು ಮನಸ್ಸಿಗೆ ತೋರಿತು. ಆಮೇಲೆ ನಿದ್ದೆ ಬಾರದಿದ್ದುದರಿಂದ ಮುಂಜಾವದಲ್ಲಿಯೇ ಎದ್ದು ಅತ್ತಿತ್ತ ನೋಡದೆ ನಡೆದು ಬಂದೆ. ಅದರಿಂದ ಇಷ್ಟು ಬೇಗ ಇಲ್ಲಿದ್ದೇನೆ. ಆದರೇನು? ಬೆಳಗಾಗುವಾಗ ಇಲ್ಲಿರುವ ರಮಣೀಯತೆಯನ್ನು ನೋಡುವುದೇ ಒಂದು ಆನಂದವಲ್ಲವೆ? ಇಲ್ಲೇ ಒಂದು ನಿಮಿಷವಿದ್ದು ಆಯಾಸವನ್ನು ತೀರಿಸಿಕೊಂಡು ಆಶ್ರಮದ ಬಳಿಗೆ ಬರುವೆನು.

**ರಾಮ**—ಆಗಬಹುದು. ಅವರು ಬಂದೊಡನೆಯೆ ತಿಳುಹಿಸುವೆನು.

[ತೆರಳುವನು.

**ಹರಿಹರ**—(ಸುತ್ತಲೂ ನೋಡುತ್ತ) . . . . . ಆಹಾ! ಇದೆಂತಹ ಸ್ಥಳ! ಎಷ್ಟು ಸಲ ನೋಡಿದರೂ ಇಲ್ಲಿಯ ಸೊಗಸು ಮಾಸದೆ ಒಂದೇ ಬಗೆಯಾಗಿರುವುದಲ್ಲಾ! . . . ಯಾವಕಡೆ ತಿರುಗಿದರೂ ಶಾಂತಿ! ಯಾವಕಡೆ ನೋಡಿದರೂ ಜೀವಕಳೆ! ಆ ಪಂಪಾ ಸರಸ್ಸಿನ ಮೇಲೆ ದೃಷ್ಟಿಯಿಟ್ಟರೆ, ಅದನ್ನೇ ನೋಡುತ್ತಿರಬೇಕೆನ್ನಿಸುತ್ತದೆ. ಅದರ ಅಲೆಗಳೋ! ಅವುಗಳ ಚಲನೆಯನ್ನು ನೋಡಿದರೆ ಆಡುವ ಮಕ್ಕಳ ನಗುವು ಜ್ಞಾಪ

ಕಕ್ಕೆ ಬರುತ್ತದೆ. . . . . . ಈ ಕಡೆಯ ಅಂಜನಾದ್ರಿಯೋ, ಆ ಕಡೆಯು ಮಾಲ್ಯವಂತವೋ! ಇವುಗಳನ್ನು ನೋಡಿದರೆ ಆಂಜನೇಯ ಭೀಮಸೇನರು ಗದೆ ಹಿಡಿದು ನಿಂತಿದ್ದ ರೀತಿಯು ಮನಸ್ಸಿಗೆ ಹೊಳೆಯುತ್ತದೆ. . . . . . . ಮುಗಿಲು ಮುಟ್ಟುವ ಈ ಮರಗಳೋ! ಮೇಲೆ ಹಬ್ಬಿ ತೂಗಾಡುತ್ತಿರುವ ಈ ಬಳ್ಳಿಗಳೋ! ಇವುಗಳ ಎಲೆ ಹೂಗಳು ಗಾಳಿಯಿಂದ ಬಳುಕಾಡುತ್ತಿರುವುದನ್ನು ನೋಡಿದರೆ ಈ ಪ್ರಪಂಚದಲ್ಲಿ ಸರಸ ಸಲ್ಲಾಪಗಳಿಲ್ಲದ ಸ್ಥಳವು ಎತ್ತಲೂ ಇರದೆಂದು ತೋರುತ್ತದೆ. . . . . . ಆಹಾ! ಈ ಪಕ್ಷಿಗಳ ಸಂಗೀತ ಸಂಭ್ರಮಗಳು ಇಷ್ಟಿರುವಾಗ ಮನುಷ್ಯನಾದವನು ನಿರುತ್ಸಾಹಿಯಾಗುವುದು ನ್ಯಾಯವೆ? . . . . . ಆದರೂ ತಲೆಯೆತ್ತಿ ಆಕಾಶವನ್ನು ನೋಡಿದರೆ ಮನುಷ್ಯನ ಸಾಹಸವು ಎಷ್ಟು ದೂರ ಮುಟ್ಟೀತು ಎನ್ನಿಸುತ್ತದೆ. ಇದೆಂತಹ ವಿಚಿತ್ರವಾದ ಸೌಂದರ್ಯಗಳ ಸಮೂಹ! ಎತ್ತ ನೋಡಿದರೂ ಸಡಗರವಿಲ್ಲದ ಸೊಬಗು; ಎತ್ತ ತಿರುಗಿದರೂ ಸದ್ದುಗದ್ದಲವಿಲ್ಲದ ಸಂತೋಷ. . . . . . ಭಗವಂತನ ಸೃಷ್ಟಿ ಎಷ್ಟು ದೊಡ್ಡದು! ಮನುಷ್ಯನು ಎಷ್ಟು ಸಣ್ಣವನು! ಮನುಷ್ಯನ ಹೃದಯದಲ್ಲಿ ಎಷ್ಟು ಕಾರ್ಪಣ್ಯವಿದೆ! ಇತರ ಜೀವರಾಶಿಯಲ್ಲಿ ಎಷ್ಟು ಸಮಾಧಾನವಿದೆ! . . . ಇಂತಹ ಸ್ಥಳದಲ್ಲಿದ್ದರೆ ಮನುಷ್ಯನ ಅಹಂಕಾರವೂ ಅಸಂತೃಪ್ತಿಯೂ ಎರಡೂ ತೊಲಗಿ ಹೋಗುವುವಲ್ಲವೆ? ಹೀಗಿರುವುದರಿಂದಲೇ ಗುರುಗಳು ಇಲ್ಲಿ ಆಶ್ರಮ ಮಾಡಿಕೊಂಡಿರುವುದು! ರಾಮಚಂದ್ರನೇ ಇಲ್ಲಿಯ ರಮ್ಯತೆಯನ್ನು ನೋಡಿ ಮೋಹಿತನಾದನಂತೆ! . . . . ವಸಿಷ್ಠರು ಇಲ್ಲಿ ತಪಸ್ಸು ಮಾಡುತ್ತಿದ್ದರಂತೆ! . . . ಆಹಾ! ಇಂತಹ ಪುಣ್ಯಕ್ಷೇತ್ರದಲ್ಲಿ ನನಗೆ ಸದ್ಗುರು ಪಾದಸೇವೆ ದೊರೆತಿರುವುದೇ ಒಂದು ದೊಡ್ಡ ಪುಣ್ಯವಲ್ಲವೆ? ಎಲ್ಲವನ್ನೂ ಬಿಟ್ಟು ಸಂನ್ಯಾಸಿಯಾದ ಆ ಮಹಾನುಭಾವರು ನನ್ನಲ್ಲಿ ಮಾತ್ರ ಅಭಿಮಾನವನ್ನಿಟ್ಟಿರಬೇಕಾದರೆ ಏನೋ ಕಾರಣವಿರಬೇಕಲ್ಲವೆ? . . . ಇರಲಿ; ನಾನೇಕೆ ತವಕಪಡಲಿ? ಸರಿಯಾದ ಕಾಲದಲ್ಲಿ ಎಲ್ಲವೂ ತಾನಾಗಿ ತಿಳಿಯುವುದು.

[ಪ್ರವೇಶ: ರಾಮಕೃಷ್ಣ.]

**ರಾಮು**—ಹರಿಯುಪ್ಪೊಡೆಯರವರೆ, ಗುರುಗಳು ದಯೆಮಾಡಿಸಿರುವರು. ನೀವು ಬಂದಿರುವಿರಿ ಎಂದು ಹೇಳಿದೆ. ಕರೆದುಕೊಂಡು ಬರಬೇಕೆಂದು ಆಜ್ಞೆಯಾಯಿತು.

**ಹರಿ**—ಇದೊ ಬಂದೆ.

[ಇಬ್ಬರೂ ತೆರಳುವರು.

---

## ದೃಶ್ಯ ೫

[ಸ್ಥಳ: ನದಿಯ ದಡದಲ್ಲಿ ಅಂಜನಾದ್ರಿಯ ತಳದಲ್ಲಿ ಒಂದು ಗವಿಯ ಮುಂದಿನ ಮಂಟಪ. ವಿದ್ಯಾರಣ್ಯರು ಒಂದು ವ್ಯಾಘ್ರಾಜಿನದ ಮೇಲೆ ಕುಳಿತಿರುವರು. ಹರಿಹರನು ತಂದ ಹಣ್ಣುಗಳನ್ನೂ ಹಾಲಿನ ಪಾತ್ರೆಯನ್ನೂ ಅವರ ಮುಂದೆ ಇರಿಸಿ, ಸ್ವಲ್ಪ ದೂರದಲ್ಲಿ ಕುಳಿತಿರುವನು.]

**ವಿದ್ಯಾರಣ್ಯ**—ಹರಿಹರೇಶ್ವರಾ, ಬಹು ಕಾಲದಿಂದ ನೀನು ಈ ಭಿಕ್ಷೆಯನ್ನು ತಂದುಕೊಡುತ್ತಿರುವೆ; ಅದರಿಂದ ಈ ದೇಹವೇನೋ ತೃಪ್ತಿಪಟ್ಟು ಬೆಳೆಯುತ್ತಿದೆ. ಆದರೆ ಬೇರೊಂದು ಬಗೆಯ ಭಿಕ್ಷೆಗಾಗಿ ನನ್ನ ಮನಸ್ಸು ಈಚೆಗೆ ಆಶೆಪಡುತ್ತಿರುವುದು.

**ಹರಿಹರ**—ಅದೆಂತಹುದು? ಅಪ್ಪಣೆಯಾಗಲಿ; ನನ್ನ ಸರ್ವಸ್ವವೂ ಗುರು ಪಾದಕ್ಕೆ ಸೇರಿಯೇ ಇರುವುದಲ್ಲ.

**ವಿದ್ಯಾ**—ನೀನಿದುವರೆಗೂ ನೀಡಿರುವುದು ಗೌಡಜನರಿಡುವ ಭಿಕ್ಷೆ. ನಿನ್ನಂತಹವನು ಇಡಬೇಕಾದುದು ಶೂರರು ಕೊಡುವ ಭಿಕ್ಷೆಯಲ್ಲವೆ?

**ಹರಿ**—(ಚಕಿತನಾಗಿ, ಸ್ವಗತ) ಇದೇನು ಹೀಗೆ ಹೇಳುವರು? (ಪ್ರಕಾಶ) ಗುರುದೇವ, ನಾನು ಶೂರನೆಂದು ಹೇಗೆತಾನೆ ಒಪ್ಪಿಕೊಳ್ಳಲಿ?

**ವಿದ್ಯಾ**—ಅದೇಕೆ? ಸಂಗಮ ಕುಲದಲ್ಲಿ ಜನಿಸಿ, ಕ್ಷತ್ರಿಯ ವೃತ್ತಿಯನ್ನವಲಂಬಿಸಿ, ಬಾಹು ಬಲಸಂಪನ್ನನಾಗಿ, ಪರಾಕ್ರಮಿಗಳಾದ

ತಮ್ಮಂದಿರ ಸಾಹಾಯ್ಯವನ್ನು ಪಡೆದಿರತಕ್ಕ ನೀನು ಶೌರ್ಯವನ್ನು ತೋರದೆ ಹೋದರೆ ನಿನ್ನ ಜನರೂ ನಿನ್ನ ಧರ್ಮವೂ ಉದ್ಧಾರವಾಗುವ ಬಗೆ ಹೇಗೆ?

**ಹರಿ**—ಸ್ವಜನರನ್ನೂ ಸ್ವಧರ್ಮವನ್ನೂ ಪರಿಪಾಲಿಸಿ ಗುರುಸೇವೆ ಮಾಡುವ ಯೋಗವನ್ನು ವಿಧಿಯು ಸಂಗಮ ರಾಜಪುತ್ರರ ಹಣೆಯಲ್ಲಿ ಬರೆದಿದ್ದಿದ್ದರೆ, ಅವರು ದೇಶಭ್ರಷ್ಟರಾಗಿ ಪರರಾಯರ ಊಳಿಗವನ್ನು ಹುಡುಕಿಕೊಂಡು ಅಲೆಯಬೇಕಾಗುತ್ತಿತ್ತೆ?

**ವಿದ್ಯಾ**—ಹರಿಹರೇಶ್ವರಾ, ಅಧೈರ್ಯವನ್ನು ಬಿಡು. ಸದ್ಯಃ ಹಾಗಿದ್ದರೆ ಎಂದೆಂದಿಗೂ ಹಾಗೆಯೇ ಇರಬೇಕೆ? ಆಪತ್ತೂ ಸಂಪತ್ತಿ ನಂತೆಯೇ ನಿಲ್ಲತಕ್ಕುದಲ್ಲವೆಂದು ನಿನಗೆ ತಿಳಿಯದೆ?

**ಹರಿ**—ಗುರುವರ್ಯರೆ, ತಾವು ಆಗಾಗ ಈ ರೀತಿ ಹೇಳಿ ನನ್ನನ್ನು ಸಂತೈಸುತ್ತಿರುವಿರಿ. ನಾನೂ ತಮ್ಮ ಮಂಗಳಾಶಾಸನವನ್ನು ಪದೇ ಪದೇ ಮನಸ್ಸಿಗೆ ತಂದುಕೊಂಡು ಧೈರ್ಯಗೊಳ್ಳುತ್ತಿದ್ದೇನೆ. ಆದರೂ ನನ್ನ ಪ್ರಾಚೀನ ಕರ್ಮವು ಹೇಗಿರುವುದೋ!

**ವಿದ್ಯಾ**—ಅದರ ಭಯದಿಂದ ಈಗ ನಿರಾಶನಾಗಿ ನಿಷ್ಪ್ರಯತ್ನ ನಾಗಿರುವೆಯಾ ಏನು?

**ಹರಿ**—ಗುರುದೇವ, ಕಾಲಕರ್ಮಗಳ ಪ್ರಗತಿಯು ವಿಪರೀತ ವಾಗಿರುವಾಗ ಮನುಷ್ಯನ ಕೈ ಎಷ್ಟು ದೂರ ಸಾಗೀತು? ಮನುಷ್ಯ ನೇನು—ನೆಲದಮೇಲಿನ ಮೋಡ ತಾನೆ?

**ವಿದ್ಯಾ**—ಅಲ್ಲ; ಮನುಷ್ಯನು ಮೋಡಕ್ಕಿಂತ ಬಹು ದೊಡ್ಡವನು. ಒಂದೊಂದು ವೇಳೆ ಅವನು ಮೋಡದಂತೆ ಆದರೂ, ಅದು ಹೊಗೆಯ ಮೋಡದಂತಾಗಬಾರದು; ಮಳೆಯ ಮೋಡದಂತಾಗಬೇಕು. ವರ್ಷಾ ಕಾಲದ ಮೇಘದಿಂದ ಮಿಂಚು ಹೊಳೆಯುವುದು; ಸಿಡಿಲು ಹೊರಡು ವುದು; ಲೋಕದ ತಾಪವನ್ನು ನೀಗುವ ನೀರಿನಧಾರೆಯು ಸುರಿಯುವುದು.

**ಹರಿ**—ಗುರುವೇ, ಬೇಟೆನಾಯಿ ಮೊಲವನ್ನಟ್ಟಿಕೊಂಡು ಬರು ವಂತೆ ಪೂರ್ವಕರ್ಮವು ನಮ್ಮನ್ನು ಬೆನ್ನಟ್ಟಿ ಬರುತ್ತಿರುವುದಲ್ಲವೆ?

**ವಿದ್ಯಾ**—ಬೇಟೆನಾಯಿಯ ಬಲವನ್ನೂ ವೇಗವನ್ನೂ ಅರಿತಿದ್ದರೂ ಜಿಂಕೆಯು ತನ್ನ ಪ್ರಯತ್ನವು ವ್ಯರ್ಥವೆಂದು ತಿಳಿದು ಒಂದೇ ಕಡೆ ನಿಂತಿರುವುದೇನು? ಅದರ ಆತ್ಮರಕ್ಷಣೋಪಾಯವನ್ನು ಅದು ಹುಡುಕಿಯೇ ಹುಡುಕುವುದು.

**ಹರಿ**—ತಂದೆಯೆ, ಅಂದು ಆನೆಗೊಂದಿಯ ಜಂಬುಕೇಶ್ವರರಾಯನು ಎಷ್ಟೋ ಧೈರ್ಯದಿಂದ ಕಾದಿದನಲ್ಲವೆ? ಅದರಿಂದ ಆದುದೇನು? ಅವನು ಗುರುತಿಲ್ಲದಂತೆ ಹಾಳಾದುದು ಮಾತ್ರವೇ ಅಲ್ಲವೆ?

**ವಿದ್ಯಾ**—ಪುತ್ರಮಿತ್ರ ಕಳತ್ರಸಹಿತವಾಗಿ ಅವನು ಮಡಿದುದೇನೋ ದಿಟ. ಆದರೆ ಅವನು ಹಾಳಾದನೆಂದು ನಾನು ಹೇಳಲಾರೆ. ಯಶಶ್ಶರೀರದಿಂದ ಅವನು ಈಗಲೂ ಜಯಶೀಲನಾಗಿಯೇ ಇರುವನು. ಅವನು ತುರುಷ್ಕರನ್ನು ಪ್ರತಿಭಟಿಸದೆ ಶರಣು ಹೊಂದಿದ್ದರೆ ಅವನಿಗೆ ಅಪಕೀರ್ತಿ ತಪ್ಪುತ್ತಿರಲಿಲ್ಲ. ಅಧೀರನ ಬದುಕೊಂದು ಬದುಕೆ? ಧೀರನ ಸಾವು ಸಾವೆ?

**ಹರಿ**—ಅವನು ಕೀರ್ತಿವಂತನಾದರೂ ರಾಜ್ಯಕ್ಕಾವ ಪ್ರಯೋಜನವೂ ಆಗದೆ ಹೋಯಿತು.

**ವಿದ್ಯಾ**—ಹಾಗೆನ್ನಬೇಡ. ಹರಿಯಣ್ಣಾ, ದೊಡ್ಡದೊಂದು ಕೋಟೆಯನ್ನು ಕಟ್ಟಬೇಕಾದರೆ ಎಷ್ಟು ಆಳವಾಗಿ ಅಗೆದು, ಎಷ್ಟು ದೊಡ್ಡ ಕಲ್ಲುಗಳನ್ನಿಟ್ಟು, ತಳಹದಿ ಹಾಕಬೇಕು? ಗೋಡೆಗಳಾದ ಮೇಲೆ ಆ ತಳಹದಿಯ ಕೆಲಸವೇನಾದರೂ ಕಣ್ಣಿಗೆ ಕಾಣುವುದೆ? ಜಂಬುಕೇಶ್ವರರಾಯನ ಪ್ರಯತ್ನವು ಅದರಂತೆ. ಅವನು ತನ್ನ ಮೂಳೆಗಳಿಂದ ತಳಹದಿ ಹಾಕಿಟ್ಟು, ಇನ್ನಾರಾದರೂ ಆದರ ಮೇಲೆ ಕೋಟೆ ಕಟ್ಟಿಯಾರೇನೋ ಎಂದು ಈಗ ಸ್ವರ್ಗಪ್ರಾಂತದಿಂದ ನೋಡುತ್ತಿರುವನೆಂದು ತಿಳಿ.

**ಹರಿ**—ಹಾಗಾದರೆ ಈಗ ನಾನು ತುರುಕರಮೇಲೆ ತಿರುಗಿ ಬೀಳಬೇಕೆಂದು ಗುರುವಿನ ಆಜ್ಞೆಯೇನು?

**ವಿದ್ಯಾ**—ಹಾಗೆ ಮಾಡಲು ನೀನು ಸಿದ್ಧನಾಗಬೇಕೆಂಬುದು ನನ್ನ ಆಶೆ. ಜಂಬುಕೇಶ್ವರರಾಯನ ಸಾಹಸದಂತೆಯೇ ನಿನ್ನ ಸಾಹಸವೂ

ಆದೀತೆಂಬ ಭಯಕ್ಕೆ ಎಷ್ಟು ಮಾತ್ರವೂ ಕಾರಣವಿಲ್ಲ. ನೀನು ಜಯ ಶಾಲಿಯಾಗುವೆ.

**ಹರಿ**—ಗುರುವರಾ, ನನಗಿರುವ ಶಕ್ತಿ ಸಂಪತ್ತುಗಳೆಷ್ಟರ ವೆಂಬುದು ತಮಗೆ ತಿಳಿದೇ ಇದೆ. ಸುಲ್ತಾನನ ಬಲವಾದರೋ ಮಿತಿಯೇ ಇಲ್ಲದುದೆಂದು ತೋರುತ್ತದೆ. ದೆಹಲಿಯಿಂದ ಹರಿದು ಬರುವ ಘೋರ ಘಾತುಕರ ಮಹಾಪ್ರವಾಹಕ್ಕೆ ನಾನು ಎದುರಾಗಿ ನಿಲ್ಲಲಾಗುವುದೆ?

**ವಿದ್ಯಾ**—ಹರಿಯಪ್ಪಾ, ಮನುಷ್ಯನಿಗಿರುವ ಶಕ್ತ್ಯುಪಪತ್ತಿಗಳು ಅವನು ಕೈಗೊಳ್ಳುವ ಕಾರ್ಯದ ಮಹಿಮೆಯಿಂದ ಬೆಳೆಯುವುವು. ಅಲ್ಲದೆ, ಈಗಿನ ಸನ್ನಿವೇಶವನ್ನು ನೋಡು. ಉತ್ತರ ದೇಶದಲ್ಲಿ ಅಲ್ಲಲ್ಲಿ ರಾಜ್ಯ ಸಂಕ್ಷೋಭೆಯಾಗಿ ಸುಲ್ತಾನನ ದರ್ಪವು ಕುಗ್ಗುತ್ತಿರುವುದೆಂದು ಕಾಶೀ ಪ್ರಾಂತದಿಂದ ಶೃಂಗಗಿರಿಗೆ ಬಂದ ಯಾತ್ರಿಕರು ಹೇಳಿದ್ದಾರೆ. ಇಂತಹ ವೇಳೆಯಲ್ಲಿ ದೆಹಲಿಯವರ ಗಮನವು ಈ ಕಡೆಗೆ ಹೆಚ್ಚಾಗಿ ತಿರುಗುವಂತಿಲ್ಲ. ಇಲ್ಲಿಯ ಪ್ರಜೆಗಳ ಮನಃಸ್ಥಿತಿಯನ್ನು ನೋಡಿದರೆ ನಿನ್ನ ಧೀರತೆಯು ಪ್ರಕಾಶಗೊಳ್ಳಲು ಇದಕ್ಕಿಂತ ಅನುಕೂಲವಾದ ಸಮಯವು ಎಂದಿಗೂ ದೊರೆಯದೆಂದು ತೋರುತ್ತದೆ. ಒಂದು ಕಡೆ ನಮ್ಮ ಶ್ರೀ ವಿದ್ಯಾತೀರ್ಥ ಗುರುಗಳ ಪ್ರಭಾವ; ಇನ್ನೊಂದು ಕಡೆ ಮಹಾಪಂಡಿತರಾದ ವೇದಾಂತ ದೇಶಿಕರ ಉಪದೇಶ ಪ್ರಾಚುರ್ಯ; ಮತ್ತೊಂದು ಕಡೆ ಪರಮ ಭಕ್ತರಾದ ಅಕ್ಷೋಭ್ಯತೀರ್ಥ ಮುನಿಗಳ ತತ್ತ್ವಪ್ರಚಾರ; ಇವರ ಜೊತೆಗೆ ಕ್ರಿಯಾಶಕ್ತ್ಯಾಚಾರ್ಯರು ಮೊದಲಾದ ಪರಮ ಶೈವರ ಉದ್ಬೋಧನೆ. ಹೀಗೆ ನಾನಾರೀತಿಗಳಲ್ಲಿ ಜನರ ಧರ್ಮೋತ್ಸಾಹವು ಕಾಂತಿಗೊಂಡು ತಲೆಯೆತ್ತುತ್ತಿದೆ. ಮೈಮರೆತು ನಿದ್ರಿಸುತ್ತಿದ್ದವರು ತಸ್ಕರ ಬಾಧೆಗೆ ಸಿಕ್ಕಿದ ಬಳಿಕ ಜಾಗರೂಕರಾಗುವಂತೆ, ಹಿಂದೂ ಜನರು ಪರಮತೀಯರಿಂದ ಹಿಂಸಿತರಾದ ಬಳಿಕ ಸ್ವಮತದಲ್ಲಿ ಅಭಿಮಾನಿಗಳಾಗುತ್ತಿರುವರು. ಹರಿಹರೇಶ್ವರಾ, ನಿನ್ನ ದೇಶಕ್ಕೂ, ದೇಶ ಧರ್ಮಕ್ಕೂ ಒದಗಿರುವ ವಿಪತ್ತನ್ನು ಪರಿಹರಿಸಲು ಇದೀಗ ತಕ್ಕ ಸಮಯ. ಧೀರನೊಬ್ಬನು ಈಗ ಮುಂದಾಳಾಗಿ ನಿಂತರೆ

ಅವನಿಗೆ ಬೆಂಬಲವಾಗಿರಲು ದೇಶೀಯರೆಲ್ಲರೂ ಸಿದ್ಧರಾಗುವರು. ಈಗ ನೀನು ಶೌರ್ಯ ಸಾಹಸಗಳನ್ನು ತೋರಿದರೆ ಜಯಶಾಲಿಯಾಗುವುದು ದಿಟ. ಏನು ಹೇಳುವೆ?

**ಹರಿ**—ಇಷ್ಟು ದೂರದ ದೃಷ್ಟಿಯಿಂದ ಹೇಳಿದ ಹಿತವಚನಕ್ಕೆ ನಾನು ಪ್ರತಿಹೇಳಬಹುದೆ?

**ವಿದ್ಯಾ**—ಸಂದೇಹವೇನಿದ್ದರೂ ಹೇಳು. ಮಹಾಕಾರ್ಯಕ್ಕೆ ಹೊರಡುವವನು ಉತ್ಸಾಹದ ಮೂರ್ತಿಯಾಗಿರಬೇಕು. ಶಂಕೆಯಿರುವ ಮನಸ್ಸಿನ ಕೆಲಸವು ಕುಂಟು ಕುದುರೆಯ ಓಟದಂತೆ.

**ಹರಿ**—ಮತ್ತಾವ ಶಂಕೆಯೂ ಇಲ್ಲ; ದೇವರು ನನಗೆ ಯೋಗ್ಯತೆ ಕೊಟ್ಟಿರುವನೆ—ಎಂಬುದೊಂದೇ.

**ವಿದ್ಯಾ**—ಹರಿಯಣ್ಣಾ, ಆ ವಿಚಾರವನ್ನು ಮರೆತುಬಿಡು. ರಾಮಸೇತು ನಿರ್ಮಾಣಕಾಲದಲ್ಲಿ ಅಳಿಲು ತನ್ನ ಯೋಗ್ಯತೆಯನ್ನು ಚಿಂತಿಸುತ್ತಿದ್ದಿತೆ? ರಣರಂಗದಲ್ಲಿ ನಿಂತ ವೀರನು ಬಲಾಬಲ ವಿಮರ್ಶೆಯನ್ನು ಬಿಟ್ಟು, ಮೈಮರೆತು, ಉಸಿರಿರುವವರೆಗೂ ಹೋರಾಡುವುದಿಲ್ಲವೆ? ದೊಡ್ಡ ಕೆಲಸಕ್ಕೆ ಕೈಹಾಕಿದವನು ಹಾಗೆ ಮೈಮರೆತಿರಬೇಕು. . . . . ಹರಿಯಣ್ಣಾ, ನೀನು ಎಂದಾದರೂ ಏಕಾಕಿಯಾಗಿ ಸಮುದ್ರತೀರದಲ್ಲಿ ನಿಂತು ಅದರ ತರಂಗವಿನ್ಯಾಸವನ್ನೇ ಎವೆಯಿಕ್ಕದೆ ನೋಡುತ್ತಿದ್ದೆಯಾ?

**ಹರಿ**—ಎಷ್ಟೋ ಬಾರಿ ಹಾಗೆ ಮಾಡಿದ್ದೇನೆ. ಅಲ್ಲಿ ನಿಂತರೆ ಹಿಂದಿರುಗುವುದಕ್ಕೆ ಮನಸ್ಸೇ ಬರುವುದಿಲ್ಲ.

**ವಿದ್ಯಾ**—ಒಳ್ಳೆಯದು; ಎಂದಾದರೂ ನೀನು ಪರ್ವತ ಶಿಖರದ ಮೇಲೆ ನಿಂತು, ದಿಗಂತರೇಖೆಯವರೆಗೂ ದೃಷ್ಟಿ ಪ್ರಸಾರ ಮಾಡಿ, ಭೂವ್ಯೋಮಾಕಾಶಗಳ ಆಲಿಂಗನಭಾವವನ್ನು ಕಂಡಿರುವೆಯಾ?

**ಹರಿ**—ಮನಃಕ್ಲೇಶವು ಹೆಚ್ಚಿದಾಗ ನಾನು ಮಾಡುವುದು ಹಾಗೆಯೇ.

**ವಿದ್ಯಾ**—ಒಳ್ಳೆಯದು; ನೀನು ಎಂದಾದರೂ ರಾತ್ರಿ ವೇಳೆ ನಿರ್ಜನ ಸ್ಥಲದಲ್ಲಿ ಮಲಗಿ ನಕ್ಷತ್ರ ಮಂಡಲವನ್ನೇ ವೀಕ್ಷಿಸುತ್ತ ಕಾಲ ವನ್ನು ಕಳೆದಿದ್ದೀಯಾ?

**ಹರಿ**—ಹಾಗೂ ಎಷ್ಟೋ ಸಲ ಮಾಡಿ ಇತರ ಚಿಂತೆಗಳನ್ನು ಮರೆತಿದ್ದೇನೆ.

**ವಿದ್ಯಾ**—ಹಾಗೆ ಮೈಮರೆಯಬಲ್ಲವನು ಮಹಾಕಾರ್ಯದೀಕ್ಷೆ ಯಲ್ಲಿ ಏಕೆ ಮೈಮರೆಯುವುದಿಲ್ಲ? ಸೃಷ್ಟಿಪ್ರಪಂಚದಲ್ಲಿ ಸಾಗರ ಪರ್ವತ ಗಗನಗಳು ಅದ್ಭುತಗಳಾದರೆ, ಮಾನವ ಪ್ರಪಂಚದಲ್ಲಿ ಧರ್ಮ ಸಮಾರಂಭ ಗಳು ಅದ್ಭುತಗಳು. ಪ್ರಕೃತಿ ವೈಚಿತ್ರ್ಯಗಳ ಮೇಲೆ ದೃಷ್ಟಿ ನೆಟ್ಟವನಿಗೆ "ನನ್ನ ದೊಡ್ಡತನ," "ನನ್ನ ಜಾಣತನ" ಎಂಬುದು ಮರೆತುಹೋಗು ವಂತೆ, ಮಹೋದ್ದೇಶವನ್ನು ಮನಸ್ಸಿನಲ್ಲಿಟ್ಟವನಿಗೆ ತನ್ನ ಕ್ಷೇಮ ತನ್ನ ಲಾಭಗಳ ಚಿಂತೆಯು ದೂರವಾಗಿ, ಉದ್ದಿಷ್ಟಾರ್ಥವೊಂದೇ ಸರ್ವದಾ ಕಣ್ಣೆದುರಿಗೆ ನಿಲ್ಲಬೇಕು.

**ಹರಿ**—ಗುರುದೇವ, ತಮ್ಮ ಕೃಪಾಬಲವು ನನಗೆ ಸಂಪೂರ್ಣವಾ ಗಿರುವಾಗ ನಾನೇಕೆ ಚಿಂತೆಮಾಡಬೇಕು? ತಮ್ಮ ಅಪ್ಪಣೆಯನ್ನು ತಲೆಯಲ್ಲಿಟ್ಟುಕೊಂಡು ನಡೆಯುವ ಚಾರನು ನಾನು.

**ವಿದ್ಯಾ**—ಹರಿಹರೇಶ್ವರಾ, ಮಾನವ ಜೀವನದ ಮರ್ಮವನ್ನು ಹೇಳುವೆನು, ಕೇಳು. ಜೀವನವೆಂಬುದು ಅನೇಕ ಬಗೆಯ ಶಕ್ತಿಗಳ ಅನ್ಯೋನ್ಯ ಸಂಘಟ್ಟನೆಯ ಪರಿಣಾಮ. ಅವುಗಳಲ್ಲೊಂದು ವಿಶ್ವಶಕ್ತಿ. ಅದು ಪಂಚಮಹಾಭೂತಗಳ ಬಿಸಿಲು, ನೆರಳು, ಮಳೆ, ಗಾಳಿ ಮೊದಲಾದ ಸಾಮಾನ್ಯ ರೂಪಗಳಲ್ಲಿಯೂ, ಸಿಡಿಲು ಭೂಕಂಪ ಮೊದಲಾದ ವಿಶೇಷ ರೂಪಗಳಲ್ಲಿಯೂ, ಮತ್ತು ಪ್ರಪಂಚದ ನಾನಾಜನರ ಸಂಕಲ್ಪ, ವಿಕಲ್ಪ, ಸೌಜನ್ಯ, ದೌರ್ಜನ್ಯ ಮೊದಲಾದ ವೃತ್ತಿವರ್ತನೆಗಳಲ್ಲಿಯೂ ಅಭಿವ್ಯಕ್ತ ವಾಗುತ್ತಿರುವುದು. ಇನ್ನೊಂದು ಪ್ರಾರಬ್ಧ ಕರ್ಮಶಕ್ತಿ. ಇದು ಅದೃಷ್ಟ ರೀತಿಯಲ್ಲಿ ವಿಶ್ವಶಕ್ತಿಯ ವಿವಿಧ ರೂಪಗಳಿಗೆ ನ್ಯೂನಾತಿರೇಕಗಳನ್ನುಂಟು ಮಾಡುತ್ತ, ಮಿತ್ರ ಶತ್ರು ವರ್ಗಗಳನ್ನೊದಗಿಸಿಟ್ಟು, ಅವರ ಕೈಯಿಂದ

ನಮಗೆ ಹಿತಾಹಿತಗಳನ್ನು ಮಾಡಿಸುತ್ತಿರುವುದು. ಮತ್ತೊಂದು ಆತ್ಮಶಕ್ತಿ. ಇದೇ ಪೌರುಷ. ಇದು ಭಗವಂತನನ್ನಾಶ್ರಯಿಸಿಕೊಂಡು, ವಿವೇಚನಾ ರೂಪವನ್ನು ತಾಳಿ, ನಮ್ಮ ಪ್ರಯತ್ನಗಳಿಗೆ ಪ್ರೇರಕವಾಗಿ, ಇತರ ಶಕ್ತಿಗಳನ್ನು ಅನುಕೂಲಪಡಿಸುವುದಕ್ಕೆ ಉದ್ಯುಕ್ತವಾಗಿರುವುದು. ಈ ಶಕ್ತಿಯೇ ಮನುಷ್ಯನ ಸ್ವಾತಂತ್ರ್ಯದ ಅಧಿಷ್ಠಾನ. ಉಳಿದ ಶಕ್ತಿಗಳು ಪ್ರತಿಕೂಲವಾಗಿ ಬಲವತ್ತರವಾಗಿರುವಾಗ ಒಂದೊಂದು ಸಲ, ಆತ್ಮಶಕ್ತಿ ಯೆಂಬುದು ಒಂದು ಬಗೆಯ ಬುದ್ಧಿ ವಿಕಾರವೇನೋ—ಎಂದು ನಮಗೇ ತೋರುವುದುಂಟು. ಅಂತಹ ಶಂಕೆಯನ್ನು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲಿಸಿಕೊಂಡವನಿಗೆ ಕಷ್ಟದಿಂದ ಪಾರಾಗಲು ಉಪಾಯವಾವುದೂ ಇರದು. ಪ್ರಾಚೀನ ಕರ್ಮವೆಂಬ ಬಿರುಗಾಳಿಯ ಪ್ರೇರಣೆಯಿಂದ ವಿಶ್ವಶಕ್ತಿಯೆಂಬ ಸಮುದ್ರದಲ್ಲಿ ಅಲೆಗಳೆದ್ದು ಒಂದರ ಹಿಂದೊಂದು ಬಂದು ಹೊಡೆಯುತ್ತಿರುವಾಗ, ಮನಸ್ಸಿನಿಂದಲೂ ಕೈಯಿಂದಲೂ ಕೂಡ ಅವುಗಳನ್ನು ತಡೆಯ ಯತ್ನಿಸುವವನೇ ಧೀರನು. ಹರಿಹರೇಶ್ವರಾ, ಈ ತತ್ತ್ವವನ್ನು ಚೆನ್ನಾಗಿ ಕೇಳಿ ಮನಸ್ಸಿನಲ್ಲಿಟ್ಟುಕೊ.

(ಕಂದ) ಜಗದಿ ಚರಾಚರಚಯದಿಂ।
ದೊಗೆವಾ ಶಕ್ತಿಗಳೆ ಕಾಲವೆನಿಸುತ ಪರಿಗುಂ ॥
ಭಗವದ್ವಿಲಾಸದಾ ಲಹ।
ರಿಗಳೊಳು ನಾವಿಕನವೋಲು ಬಾಳ್ವಂ ಜೀವಂ ॥

ಆ ಲಹರಿಗಳೊಳವಂ ತನು।
ಕೋಲಮನಾಶ್ರಯಿಸಿ ಮಾಡಲಿಹ ಯಾತ್ರೆಗೆ ಕ ॥
ಲ್ಲೋಲಗಳನುವಿರೆಯುಂ ಪ್ರತಿ।
ಕೂಲಿಕುವೋರೊರ್ಮೆ ಪೂರ್ವಕರ್ಮಸಮೀರಂ ॥

ಅಂತೊದವೆ ವಿಘ್ನಮದರಿಂ।
ಚಿಂತೆಯನಾಸದೆಯೆ ಬುದ್ಧ್ಯರಿತ್ರುವ ಪುರುಷಂ ॥
ಸಂತತ ಧೃತಿಯಿಂ ಯೋಜಿಸೆ।
ಪಿಂತುಳಿಯದೆ ತೊಡರ ಕಳೆದು ತೆರಳಲ್ಕಕ್ಕುಂ ॥

ಅಂತೆಸಗದೆ ಧೃತಿಯಂ ತೊರೆ।
ದಂತಶ್ಯಕ್ತಿಯ ನಿಯೋಜನಂ ಗೆಯ್ಯದಿರಲ್ ॥
ಅಂತಹನ ಕರ್ಮವಾಯುವ।
ನಂತೋರ್ವ್ಯಾವರ್ತಕಂಗಳೊಳ್ ಸಿಲುಕಿಸುಗುಂ ॥

ಎನಿತೆನಿತು ಯುಕುತಿ ಸಾಸದಿ।
ತನುನೌಕೆಯ ಧಿಷಣದಂಡದಿಂ ಕಾಲಮಹಾ ॥
ಧುನಿಯೊಳ್ ನಡೆಯಿಕುವೋ ತಾ।
ನನಿತನಿತುಂ ಕರ್ಮವಾತ ಭೀತಿಯ ಕಳೆಗುಂ ॥

ಮುನಿದು ಪುರಾಕೃತಪವನಂ।
ಕಸಲಿಸೆ ಕಾಲಪ್ರವಾಹದುದ್ವೀಚಿಗಳಂ ॥
ಮನವಂ ಶಮದಮಧೃತಿಗಳಿ।
ನನುಗೊಳಿಸುತೆ ಧರ್ಮಪಥದಿ ನಡೆವುದೆ ಯೋಗಂ ॥

ಕರುಣೆಯಿನೆಲ್ಲ ಜನರ್ಗಂ।
ಪರಗತಿಯಂ ತದವಿರುದ್ಧ ಸುಖ ಸಂತತಿಯಂ ॥
ದೊರೆಯಿಸಲನುವಹ ತೆರದಿಂ।
ಚರಿಸುತ ನಿಜ ಹಿತವ ಗಳಿಪ ಮರ್ಮವೆ ಧರ್ಮಂ ॥

ಋಜು ಮಾರ್ಗವ ಪಿಡಿದನಿಶಂ।
ನಿಜ ಧರ್ಮವನೆಸಗುತಮಲ ನಿಃಸ್ಪೃಹ ಮತಿಯಿಂ ॥
ವಿಜಯಾಜಯಗಳಿನಲುಗದೆ।
ಭುಜಿಪಂ ಪ್ರಾರಬ್ಧ ಫಲವ ಮುದದಿಂ ವಿಬುಧಂ ॥

ಹರಿಹರೇಶ್ವರಾ, ಈಶ್ವರ ಲೀಲಾಸ್ವರೂಪವಾಗಿ, ಕಾಲವೆಂದು ವ್ಯವಹೃತವಾಗಿ, ಅನಂತಧಾರೆಯಾಗಿ ಹರಿಯುವ ಜಗಚ್ಛಕ್ತಿಯ ಮಹಾ ಪ್ರವಾಹವು ಎಷ್ಟೋ ರಾಜ್ಯಗಳನ್ನೂ ಎಷ್ಟೋ ಜನಪದಗಳನ್ನೂ ಕೊಡೆದುಕೊಂಡು ಹೋಗಿದೆ; ಮತ್ತೆಷ್ಟೋ ದೇಶಗಳನ್ನೂ ಎಷ್ಟೋ ರಾಷ್ಟ್ರಗಳನ್ನೂ ಹೊಸದಾಗಿ ನಿರ್ಮಿಸಿದೆ. ನಾವೆಲ್ಲರೂ ಅದರ ತೆರೆಗಳ

ಮೇಲೆ ತೇಲುತ್ತಿದ್ದೇವೆ. ಧೀರತೆಯಿಂದಲೂ ಜಾಗರೂಕತೆಯಿಂದಲೂ ನಾವು ಆ ತೆರೆಗಳನ್ನು ಸಹಾಯಕ್ಕೆ ತೆಗೆದುಕೊಂಡರೆ ಮುಂದು ಮುಂದಕ್ಕೆ ಸಾಗಬಹುದು. ಒಂದು ವೇಳೆ ಪ್ರಾಚೀನ ಕರ್ಮವು ಅತಿ ವಿರೋಧಿಯಾಗಿದ್ದರೆ ನಾವು ಕ್ಷೇಮದಿಂದ ಒಂದು ದ್ವೀಪವನ್ನಾದರೂ ಸೇರಬಹುದೆಂಬ ಆಶೆಯುಂಟು. ಹಾಗೆಮಾಡದೆ ಎದೆಗುಂದಿ ನಿರ್ವಿಣ್ಣರಾಗಿ ನಿರುದ್ಯಮರಾಗಿದ್ದರೆ, ಆ ತೆರೆಗಳೇ ನಮ್ಮನ್ನು ಮುಳುಗಿಸಿಬಿಟ್ಟಾವು; ಅಥವಾ ಯಾವುದೋ ಒಂದು ಬಂಡೆಯಮೇಲೆ ನಮ್ಮ ದೋಣಿಗಳನ್ನು ಉರುಳಿಸಿ ಒಡೆದುಬಿಟ್ಟಾವು. ಹೇಗಾದರೂ ನಿನ್ನ ಪ್ರಯತ್ನವೇ ನಿನಗೆ ಕಷ್ಟನಿವಾರಣೆಯ ಉಪಾಯವೆಂಬುದನ್ನು ಮರೆಯಬೇಡ. ಹರಿಯಪ್ಪಾ, ಧೈರ್ಯವನ್ನವಲಂಬಿಸು; ಪೌರುಷವನ್ನು ತೋರು; ಕ್ಷಿಪ್ರದಲ್ಲಿಯೇ ಮಂಗಳವುಂಟಾಗುವುದು.

[ಪ್ರವೇಶ : ರಾಮಕೃಷ್ಣ.]

**ರಾಮ**—ಶೃಂಗಗಿರಿಯಿಂದ ತ್ರ್ಯಂಬಕಶಾಸ್ತ್ರಿಗಳು ಬಂದಿದ್ದಾರೆ.

**ವಿದ್ಯಾ**—(ಪ್ರಸನ್ನತೆಯಿಂದ) ಒಳಕ್ಕೆ ಬರಲಿ. [**ರಾಮಕೃಷ್ಣನು ಹೋಗುವನು.**] ಹರಿಯಪ್ಪಾ, ವಿಶೇಷ ವಾರ್ತೆಯೇನೋ ಬಂದಿರುವಂತೆ ತೋರುತ್ತದೆ.

[**ರಾಮಕೃಷ್ಣನು ತ್ರ್ಯಂಬಕಶಾಸ್ತ್ರಿಯೊಡನೆ ಬರುವನು;**
**ಶಾಸ್ತ್ರಿಯು ದಂಡಪ್ರಣಾಮಮಾಡುವನು.**]

**ವಿದ್ಯಾ**—ನಾರಾಯಣ, ನಾರಾಯಣ! . . . . . . ಬನ್ನಿರಿ, ತ್ರ್ಯಂಬಕಶಾಸ್ತ್ರಿಗಳೆ; ಯಾವಾಗ ಬಂದಿರಿ? ಅಲ್ಲಿ ಎಲ್ಲರೂ ಕ್ಷೇಮದಲ್ಲಿರುವರಷ್ಟೆ?

**ತ್ರ್ಯಂಬಕ**—ಎಲ್ಲರೂ ಕ್ಷೇಮದಲ್ಲಿರುವರು. ನಾನು ಈಗತಾನೆ ಬಂದೆ.

**ವಿದ್ಯಾ**—ಏನು ವಿಶೇಷ?

**ತ್ರ್ಯಂಬಕ**—ಈ ಸನ್ನಿಧಿಯಲ್ಲಿ ಒಂದು ಸಂಗತಿಯನ್ನು ಅರಿಕೆ ಮಾಡಬೇಕೆಂದು ಶ್ರೀಗಳವರು ನನ್ನನ್ನು ಕಳುಹಿಸಿದ್ದಾರೆ.

**ವಿದ್ಯಾ**—ಏನು ಅದು ? . . . ಹೇಳಬಹುದಷ್ಟೆ ? ಈ ಹರಿಯಪ್ಪನು ನಮ್ಮವನು. ಈತನಿಂದ ನಾವು ಗೂಢವಾಗಿರಿಸಬೇಕಾದುದು ಯಾವುದೂ ಇಲ್ಲ. ನಮ್ಮ ಸಂಕಲ್ಪಗಳೆಲ್ಲವೂ ನೆರವೇರಬೇಕಾಗಿರುವುದು ಈತನಿಂದಲೇ.

**ತ್ರ್ಯಂಬಕ**—ಪರಮ ಸಂತೋಷ. ಹಾಗಾದರೆ ನಾನು ತಂದಿರುವ ವಾರ್ತೆಗೆ ಇದೇ ಸುಸಮಯವಾಗಿದೆ. ಅದೇನೆಂದರೆ, ಕಾಶಿಗೆ ಹೋಗಿದ್ದ ಯಾತ್ರಿಕರಲ್ಲಿ ಕೆಲವರು ಕಳೆದ ವಾರ ಹಿಂದಿರುಗಿ ಬಂದರು.

**ವಿದ್ಯಾ**—(ಕುತೂಹಲದಿಂದ) ಓಹೋ ! ಏನು ಅವರು ತಂದಿರುವ ವಾರ್ತೆ ? ಅವರು ದೆಹಲಿಯ ಪ್ರಾಂತ ಹೋಗಿದ್ದರೇನು ?

**ತ್ರ್ಯಂಬಕ**—ಅವರು ಆರ್ಯಾವರ್ತದ ಪುಣ್ಯ ಸ್ಥಲಗಳನ್ನೆಲ್ಲಾ ನೋಡಿಕೊಂಡು, ಕುರುಕ್ಷೇತ್ರದ ಕಡೆಯಿಂದ ಇಂದ್ರಪ್ರಸ್ಥದ ಮಾರ್ಗವಾಗಿ ಬಂದಿದ್ದಾರೆ.

**ವಿದ್ಯಾ**—ಹಾಗಾದರೆ ಆ ಕಡೆಯ ವೃತ್ತಾಂತವೇನು ?

**ತ್ರ್ಯಂಬಕ**—ದೆಹಲಿಯ ಸುಲ್ತಾನನು ದೊಡ್ಡ ಸೈನ್ಯವನ್ನು ಕಟ್ಟಿಕೊಂಡು ಈಸಲ ಚೀನಾರಾಜ್ಯದ ಮೇಲೆ ಹೊರಟಿರುವನಂತೆ. ಅವನು ಹಿಂದಿರುಗಿ ಬರಲು ಒಂದು ವರ್ಷವಾದರೂ ಹಿಡಿಯುವುದು. ಅದಲ್ಲದೆ ಪಾರಸೀಕ ರಾಜ್ಯವನ್ನು ಗೆಲ್ಲಬೇಕೆಂದು ಅವನು ಇನ್ನೊಂದು ದೊಡ್ಡ ಪಡೆಯನ್ನು ಕಳುಹಿಸಿರುವನಂತೆ. ಅದು ಎಂದಿಗೆ—ಹೇಗೆ—ಹಿಂದಿರುಗುವುದೋ ನಿಶ್ಚಯವಿಲ್ಲ. ಇದೇ ತಮಗೆ ಸಮಯವೆಂದೆಣಿಸಿ, ಅವನ ಸಾಮಂತರಾಜರೂ ಮಂಡಲಾಧಿಕಾರಿಗಳೂ ತಾವು ತಾವೇ ರಾಜರೆಂದು ಹೇಳಿಕೊಳ್ಳುತ್ತ ಸ್ವತಂತ್ರರಾಗುತ್ತಿರುವರು.

**ವಿದ್ಯಾ**—ಕೇಳಿದೆಯಾ, ಹರಿಯಣ್ಣಾ ? ನಾವು ಆಡಿಕೊಳ್ಳುತ್ತಿದ್ದ ಮಾತಿಗೆ ತಕ್ಕಂತೆ ಸನ್ನಿವೇಶಾನುಕೂಲದ ಸೂಚನೆ ಬಂದಿದೆ. ಭಾರತೀತೀರ್ಥ ಗುರುಗಳು ಕಳುಹಿಸಿರುವ ಈ ವಾರ್ತೆಯೇ ನಿನಗೆ ಪರಮ ಪ್ರಸಾದವೆಂದು ತಿಳಿದುಕೊ. ನಿನಗೆ ಕರ್ತವ್ಯ ಜ್ಞಾನವನ್ನುಂಟು

ಮಾಡುವುದಕ್ಕಾಗಿಯೇ ಆ ವೃತ್ತಾಂತವು ಇಲ್ಲಿ ಈ ಹೊತ್ತಿಗೆ ಸರಿಯಾಗಿ ಬಂದು ಸೇರಿರುವಂತೆ ತೋರುತ್ತದೆ......ಅಯ್ಯಾ, ಲೋಕದ ಗತಿಯು ಬಹು ವಿಚಿತ್ರವಾದುದು. ಉತ್ತಮರು ಅಪಜಯದಿಂದಲೂ ಅಧಮರು ಅತಿಜಯದಿಂದಲೂ ಶಿಕ್ಷೆ ಪಡೆಯಬೇಕಾಗಿರುವುದು. ದೆಹಲಿಯ ಸುಲ್ತಾನನಿಗೆ ಅವನ ವಿಜಯಕೋಲಾಹಲವೇ ವಿಧಿಪ್ರಕೋಪನವೆಂದು ಕಾಣುತ್ತದೆ. ಜಯ ಪ್ರಾಪ್ತಿಯಿಂದ ಅವನಿಗೆ ಅಹಂಕಾರ ಹೆಚ್ಚಿತು; ಅಹಂಕಾರ ಬಲದಿಂದ ಆಶೆ ಬೆಳೆಯಿತು; ಅತ್ಯಾಶೆಯಿಂದ ಅಜಾಗರೂಕತೆ ಹುಟ್ಟಿತು; ಅಜಾಗರೂಕತೆಯಿಂದ ವಿಪರೀತೋದ್ಯಮಕ್ಕೆ ದಾರಿಯಾಯಿತು; ಉದ್ಯಮ ವೈಪರೀತ್ಯವಾದರೋ,—ಉದ್ಯಮ ಶೂನ್ಯತೆಯ ಹಾಗೆಯೇ,—ವಿನಾಶಕರವಾಗುವುದು. ಹರಿಹರೇಶ್ವರಾ, ನಮ್ಮಲ್ಲಿ ಶೂರರಾರಾದರೂ ಇದ್ದರೆ ಇದೀಗ ಅವರಿಗೆ ತಕ್ಕ ಸಮಯ. ಶತ್ರುವು ಮದಿಸಿ ಮೈಮರೆತು ಹೊರಟಿರುವಾಗಲೇ ಅಲ್ಲವೆ ನಾವು ಎಚ್ಚೆತ್ತು ನಮ್ಮ ದೇಶವನ್ನು ಉಳಿಸಿಕೊಳ್ಳಬೇಕಾದುದು? ನೋಡು; ನಿನ್ನ ಹೃದಯದಲ್ಲಿ ಧೈರ್ಯವಿದೆಯೆ? ಧರ್ಮಾಭಿಮಾನವಿದೆಯೆ? ಕುಲ ಗೌರವ ಸ್ಮರಣೆಯಿದೆಯೆ? ಇದ್ದರೆ ನೋಡು; ಇದೀಗ ಅದನ್ನು ತೋರಲು ತಕ್ಕ ವೇಳೆ.

**ಹರಿ**—ಗುರುದೇವಾ, ತಾವು ಇಷ್ಟು ಹೇಳಿದ ಮೇಲೂ ನನಗೆ ಸಂದೇಹವೆ? ಇದುವರೆಗೂ ಕುರುಡನಂತಿದ್ದುದಾಯಿತು. ಈಗ ಗುರು ಕೃಪೆಯಿಂದ ದೃಷ್ಟಿ ಬಂದಿದೆ. ಜೀವಿತವನ್ನು ಸಾರ್ಥಕಪಡಿಸಿಕೊಳ್ಳುವ ದಾರಿಯು ಈಗ ನನಗೆ ಕಾಣಿಸುತ್ತಿದೆ. ಇನ್ನಾದರೂ ಆ ದಾರಿಯಲ್ಲಿ ನಡೆಯಬೇಡವೆ? ಗುರುವೆ, ಅದಕ್ಕೆ ಬೇಕಾಗುವ ಶಕ್ತಿಯನ್ನು ತಾವೇ ಕರುಣಿಸಿ ಕಾಯಬೇಕು.

**ವಿದ್ಯಾ**—ಹರಿಯಣ್ಣಾ, ಶ್ರೀರಾಮಚಂದ್ರನು ವನವಾಸಕ್ಕೆ ಹೊರಟ ಸಂದರ್ಭದಲ್ಲಿ ತಾಯಿ ಕೌಸಲ್ಯಾದೇವಿ ನುಡಿದ ಹರಕೆಯ ಮಾತೇನು, ಬಲ್ಲೆಯಾ?

ಯಂ ಪಾಲಯಸಿ ಧರ್ಮಂ ತ್ವಂ ಧೃತ್ಯಾ ಚ ನಿಯಮೇನ ಚ।
ಸ ವೈ ರಾಘವ ಶಾರ್ದೂಲ ಧರ್ಮಸ್ತ್ವಾಮಭಿರಕ್ಷತು ॥

ನಾನು ಈಗ ನಿನಗೆ ಮಾಡಬೇಕಾದ ಹರಕೆಯೂ ಅಷ್ಟೇ. ಧರ್ಮ ಸಂರಕ್ಷಣೆಯ ಮೇಲೆ ನೀನು ದೃಷ್ಟಿಯಿಟ್ಟು ನಡೆದರೆ ಆ ಧರ್ಮವೇ ನಿನ್ನನ್ನು ಸಂರಕ್ಷಿಸುವುದು; ಸಂದೇಹಬೇಡ.

**ಹರಿ**—ಗುರುವೇ, ನಾನು ತಮ್ಮ ಕೈಯಲ್ಲಿಯ ಕೋಲು. ಅದನ್ನುಪಯೋಗಿಸಿ ಕಾರ್ಯಸಾಧನೆಮಾಡುವ ಭಾರವು ತಮ್ಮನ್ನೇ ಸೇರಿದೆ.

**ವಿದ್ಯಾ**—ಹಾಗಾದರೆ ಹಿಂದೂ ಜನಪನ್ನು ಕಾಪಾಡಿ, ವೇದ ಮತವನ್ನುದ್ಧರಿಸುವ ದೀಕ್ಷೆಯನ್ನು ನೀನು ಕೈಕೊಳ್ಳುವೆಯಾ?

**ಹರಿ**—ತಮ್ಮ ಆಜ್ಞೆಯಂತೆ ಕೈಕೊಂಡಿರುವೆನು. ಸೂರ್ಯ ಸಾಕ್ಷಿಯಾಗಿ,—ಚಂದ್ರ ಸಾಕ್ಷಿಯಾಗಿ,—ಪಂಚಭೂತ ಸಾಕ್ಷಿಯಾಗಿ, —ಪರಮೇಶ್ವರ ಪಂಪಾಪತಿಯೇ ಸಾಕ್ಷಿಯಾಗಿ,—ಗುರುದೇವರ ಪಾದಕಮಲಗಳೇ ಸಾಕ್ಷಿಯಾಗಿ—ನನ್ನ ಸರ್ವಸ್ವವನ್ನೂ ತಾವು ನಿಯಮಿಸುವ ಕಾರ್ಯಕ್ಕೆ ವಿನಿಯೋಗಿಸುವೆನು. ಕಾರ್ಯ ರೀತಿಯ ನ್ನರುಹಿ ಹರಸಬೇಕು.

**ವಿದ್ಯಾ**—ಇದೀಗ ಸರಿ. ಹರಿಹರೇಶ್ವರಾ, ಇಂದೇ ಶುಭ ದಿವಸ. ಈ ಮುಹೂರ್ತವೇ ಶುಭ ಮುಹೂರ್ತ. ಹೊರಡು; ಇಲ್ಲಿಂದ ಹೋಗಿ ನಿನ್ನ ತಮ್ಮಂದಿರಿಗೆ ಈ ನಿನ್ನ ಪ್ರತಿಜ್ಞೆಯನ್ನು ತಿಳುಹಿಸು. ಹಾಗೆಯೇ ಆನೆಗೊಂದಿಯ ಪ್ರಜೆಗಳಲ್ಲಿ ಸ್ವಧರ್ಮಾಭಿಮಾನವನ್ನೂ ಸ್ವರಾಜ್ಯಾಭಿ ಲಾಷೆಯನ್ನೂ ಉದ್ರೇಕಗೊಳಿಸು. ಐಕಮತ್ಯ ಸಾಹಸಗಳೇ ಈಗ ಅವರ ಕ್ಷೇಮೋನ್ನತಿಗಳಿಗೆ ಆವಶ್ಯಕವಾಗಿರುವ ಸಾಧನಗಳೆಂದು ತಿಳಿಯಹೇಳು. ಅವರೆಲ್ಲ ಒಂದುಗೂಡಿ ಕೈಯೆತ್ತಿದರೆ ದೆಹಲಿಯ ಧೂರ್ತನನ್ನು ಮೊಲೆಗೊತ್ತುವುದು ಒಂದು ಕಷ್ಟವೆ? ಈ ಸೂಕ್ಷ್ಮವನ್ನು ಗೂಢವಾಗಿ ಜನರಲ್ಲಿ ಸಾರಿ ಅವರ ಅನುರಾಗವನ್ನು ಸಂಪಾದಿಸು.

**ಹರಿ**—ಗುರುವೆ, ಈ ಕೆಲಸಕ್ಕೆ ನಾನೇನೂ ಈಗ ಹೊಸದಾಗಿ ಪ್ರಯಾಸಪಡಬೇಕಾಗಿಲ್ಲ. ಸುಲ್ತಾನನ ಕಡೆಯವರೇ ಆ ಕೆಲಸವನ್ನು ಬಹು ಮಟ್ಟಿಗೆ ಮಾಡಿದ್ದಾರೆ. ಅವರು ಮಾಡುವ ದುಶ್ಚೇಷ್ಟೆಗಳಿಂದಲೂ ಅವರು ಕೊಡುವ ಹಿಂಸೆಗಳಿಂದಲೂ ಜನರು ಬೇಕಾದಷ್ಟು ನೊಂದು ರೋಷಗೊಂಡಿದ್ದಾರೆ. ಆದರೆ ಅವರೇನಮಾಡಬಲ್ಲರು? ಪ್ರಬಲ ಶತ್ರುವಿಗೆ ಸಿಕ್ಕಿ, ನಾಯಕನಿಲ್ಲದೆ ಇರುವ ಜನರೂ, ತೋಳನಿಗಿದಿರಾಗಿ ಕಾಯುವನಿಲ್ಲದೆ ಇರುವ ಕುರಿಮಂದೆಯೂ ಒಂದೇ ಅಲ್ಲವೆ?

**ವಿದ್ಯಾ**—ಹಾಗಿದ್ದರೆ ನಿನ್ನ ಕಾರ್ಯವು ಮತ್ತಷ್ಟು ಸುಲಭವೇ ಆಯಿತಷ್ಟೆ? ಆ ಜನರಿಗೆ ನೀನೇ ಏಕೆ ನಾಯಕನಾಗಬಾರದು? ನೋಡು; ಧೈರ್ಯದಿಂದ ಅವರಿಗೆ ಮುಂದಾಳಾಗಿ ನಿಲ್ಲು. ಗುಪ್ತವಾಗಿ ಒಂದು ಸೇನೆಯನ್ನು ಸಿದ್ಧಪಡಿಸು. ಹೀಗೆ ನೀನು ಉಪಕರಣಗಳನ್ನು ಒದಗಿಸಿಕೊಂಡು ಶತ್ರುಪಕ್ಷದವರು ಮೈಮರೆತಿರುವ ವೇಳೆಯನ್ನು ಹೊಂಚಿ ನೋಡುತ್ತಿರಬೇಕು. ಅಂತಹ ವೇಳೆಯಲ್ಲಿ ಅವರನ್ನು ಮುತ್ತಿದರೆ ಪರದೇಶೀಯ ಪೀಡೆಯು ಸುಲಭವಾಗಿ ನಿರ್ಮೂಲವಾಗುವುದು; ಮುಂದಕ್ಕೆ ನಿನ್ನ ಮಾರ್ಗವು ನಿಷ್ಕಂಟಕವಾಗಿರುವುದು.

[ಹೊರಗೆ ಕುದುರೆಗಳು ಬಂದ ಶಬ್ದವಾಗುವುದು.
ರಾಮಕೃಷ್ಣಶಾಸ್ತ್ರಿಯು ನೋಡಲು ಹೋಗುವನು.]

ಈ ಕಾರ್ಯವಿಧಾನವು ನಿನ್ನ ಮನಸ್ಸಿಗೆ ಒಪ್ಪುವುದೆ? ನಿನ್ನ ತಮ್ಮಂದಿರೂ ಒಪ್ಪಿ ಅನುವಾದಾರೆ? ಆಲೋಚಿಸಿ ಹೇಳು. ನೀನು ಸಮ್ಮತಿಸುವುದಾದರೆ ಈಗಲೇ ಈ ಸಂತೋಷದ ಮಾತನ್ನು ಶೃಂಗಗಿರಿಗೂ ಕಾಂಚೀಪುರಕ್ಕೂ ಹೇಳಿಕಳುಹಬೇಕೆಂದಿರುವೆನು.

[ಪ್ರವೇಶ: ರಾಮಕೃಷ್ಣ.]

**ರಾಮ**—ಬುಕ್ಕಣ್ಣನವರು ಅಶ್ವಾರೂಢರಾಗಿ ಇನ್ನೊಬ್ಬ ಅಶ್ವಸಾದಿಯೊಡನೆ ಬರುತ್ತಿದ್ದಾರೆ.

**ವಿದ್ಯಾ**—(**ಕುತೂಹಲದಿಂದ**) ಆತನನ್ನು ಇಲ್ಲಿಗೆ ಕರೆದುಕೊಂಡು ಬಾ.

**ರಾಮು**—ಅಪ್ಪಣೆ. [ಹೋಗುವನು.

**ವಿದ್ಯಾ**—ಹರಿಯಣ್ಣಾ, ಹೆದರಬೇಡ. ಈ ದಿನ ಏನೋ ವಿಶೇಷ ಸಂಗತಿಗಳ ಸಂಧಿಕಾಲದಂತೆ ತೋರುತ್ತದೆ. ಮಹಾಕಾರ್ಯವನ್ನು ಸಾಧಿಸುವ ಪುಣ್ಯವು ಯಾರಿಗೆ ಲಭ್ಯವೋ ಅಂತಹವನ ಆಯುಷ್ಯದೊಳಗಾಗಿ ಇಂತಹ ದಿನವೊಂದು ಎಂದೋ ಒಂದು ಸಲ ಬರುತ್ತದೆ. ಅದನ್ನು ವ್ಯರ್ಥವಾಗಿ ಕಳೆಯದವನೇ ಕೃತಾರ್ಥನಾಗತಕ್ಕವನು. ನೀನೀಗ ಕಳವಳವನ್ನು ಬಿಡು. ನಿನಗೆ ಬೇಕಾದ ಸಹಾಯವೆಲ್ಲವೂ ವಿದ್ಯಾತೀರ್ಥ ದಿವ್ಯಚರಣ ಪ್ರಭಾವದಿಂದ ಒದಗುವುದು.

[ಪ್ರವೇಶ: ರಾಮಕೃಷ್ಣಶಾಸ್ತ್ರಿಯೊಡನೆ ಬುಕ್ಕಣ್ಣ.
ಬುಕ್ಕಣ್ಣನು ಸಾಷ್ಟಾಂಗ ಪ್ರಣಾಮ ಮಾಡುವನು.]

ಬಾ, ಬುಕ್ಕಣ್ಣಾ, ಏನು ಸಮಾಚಾರ?

**ಬುಕ್ಕಣ್ಣ**—ಅಣ್ಣನವರು ಇಲ್ಲಿಗೆ ಬಂದಿರಬಹುದೆಂದು ಊಹಿಸಿ ಅವರನ್ನು ನೋಡಲು ಬಂದೆ.

**ವಿದ್ಯಾ**—ಏನು ಈ ಆತುರತೆಗೆ ಕಾರಣ?

**ಬುಕ್ಕಣ್ಣ**—ಮತ್ತೇನೂ ಇಲ್ಲ; ಈ ಹೊತ್ತು ಊರಿನಲ್ಲೊಂದು ಬೊಬ್ಬೆ ಎದ್ದಿದೆ. ನಿನ್ನೆ ರಾತ್ರಿ ನಾಲ್ವರೈವರು ತುರುಕ ಸೈನಿಕರು ಕೋಟೆಬಾಗಿಲ ಬಳಿಯ ಆಂಜನೇಯ ದೇವಾಲಯದೊಳಕ್ಕೆ ನುಗ್ಗಿದರು. ಅವರು ಆ ಗುಡಿಯ ಮೇಲೆ ಕಣ್ಣಿಟ್ಟಿದ್ದರೆಂಬುದನ್ನು ನಮ್ಮವರು ಯಾರೋ ಹೇಗೋ ಮುಂದರಿತುಕೊಂಡು, ಗುಡಿಯೊಳಗೆ ಮೂವತ್ತು ನಾಲ್ವತ್ತು ಮಂದಿ ಬಲಿಷ್ಠರನ್ನು ಸೇರಿಸಿಟ್ಟು ಅವಿತುಕೊಂಡಿದ್ದರು. ಆ ತುರುಕರು ಒಳಕ್ಕೆ ನುಗ್ಗಿದ ಕೂಡಲೆ ಇವರು ಗುಡಿಯ ಬಾಗಿಲುಗಳನ್ನು ಭದ್ರಪಡಿಸಿ, ಆ ಜನರನ್ನು ಹಿಡಿದು ಕಂಭಗಳಿಗೆ ಬಿಗಿದು, ಸೊಕ್ಕಾರುವಂತೆ ಹೊಡೆದು, ಅದರ ಗಡ್ಡ ಮೀಸೆಗಳನ್ನು ಕತ್ತರಿಸಿ, ಮೈಮೇಲೆ ಬರೆಹಾಕಿ ಅವರನ್ನು ಹೊರಕ್ಕೆ ತಳ್ಳಿ

ದರು. ಇದನ್ನೊಂದನ್ನೂ ನವಾಬನು ಅರಿಯ; ಅವನು ಈ ದಿನ ಊರಿನಲ್ಲಿಲ್ಲ; ಪರಿವಾರದೊಡನೆ ಬೇಟೆಗೆ ಹೋಗಿದ್ದಾನೆ. ನಮ್ಮ ಜನ ಕೆಲವರು ಇದೇ ಸಮಯವೆಂದೆಣಿಸಿ, ಗುಂಪು ಕಟ್ಟಿಕೊಂಡು ನವಾಬನ ಪಾಳೆಯದ ಮೇಲೆ ನುಗ್ಗುವ ಆಲೋಚನೆಯಲ್ಲಿದ್ದಾರೆ. ತಮ್ಮಲ್ಲಿ ಯಾರು ಮುಂದಾಳಾಗಿರಬೇಕೆಂದು ಅವರು ಚರ್ಚೆಮಾಡಿ ಕೊಂಡು ಏನೂ ತೋರದೆ ಕಡೆಗೆ ನನ್ನಲ್ಲಿಗೆ ಬಂದರು. ಆದರೆ ಅಣ್ಣ ನವರ ಮಾತಿಲ್ಲದೆ ನಾನು ಏನೂ ಮಾಡಲಾಗದೆಂದು ಅವರಿಗೆ ಹೇಳಿ, ಅಣ್ಣನವರ ಆಜ್ಞೆಯನ್ನೂ ಗುರುಗಳವರ ಆಶೀರ್ವಾದವನ್ನೂ ಪಡೆದು ಹೋಗೋಣವೆಂದು ಬಂದೆ.

**ಹರಿ**—ಇಂಥ ಗೊಂದಣಗಳು ಆಗಾಗ ನಡೆಯುತ್ತಲೇ ಇವೆ. ಅದರಿಂದೇನು ಪ್ರಯೋಜನ?

**ವಿದ್ಯಾ**—ಹಾಗೆನ್ನಬೇಡ. (ನಮ್ಮ ಜನರ ಮನೋಧರ್ಮ ಹೇಗಿದೆ ಯೆಂಬುದು ಈ ಸಣ್ಣ ಡಾಮರಗಳಿಂದ ನಮಗೆ ತಿಳಿದುಬರುವುದಿಲ್ಲವೆ? ವಿದೇಶೀಯರ ವಿಷಯದಲ್ಲಿ ಅವರ ಮನಸ್ಸು ಹೀಗಾಗದೆ ಇದ್ದರೆ ನೀನು ಮಾಡಬೇಕಾಗಿರುವ ಪ್ರಯತ್ನಕ್ಕೆ ಬೆಂಬಲ ಹೇಗೆ ದೊರಕೀತು? ಹರಿಯಣ್ಣಾ, ನೋಡು. ಪೌರುಷ ಪ್ರಕಾಶಕ್ಕೆ ತಕ್ಕ ಸಮಯವು ಸಮೀಪಿಸುತ್ತಿದೆಯೆಂದು ಇದರಿಂದ ತೋರುವುದಿಲ್ಲವೆ?

**ಹರಿ**—ಜನರು ರೋಷಾವೇಶಗೊಂಡಿರುವುದೇನೋ ನಿಜ. ಆದರೆ ಇಂಥಾ ಅಶಿಕ್ಷಿತ ಜನರ ಕ್ಷಣಿಕವಾದ ಉತ್ಸಾಹದಿಂದ ಏನು ಮಾಡಲಾದೀತು?

**ವಿದ್ಯಾ**—ಅದನ್ನೊಪ್ಪಿದೆ. ಆದರೆ ಅಶಿಕ್ಷಿತರಾಗಿರುವ ಜನರನ್ನು ಸುಶಿಕ್ಷಿತರನ್ನಾಗಿ ಮಾಡುವ ಕರ್ತವ್ಯವು ನಿನ್ನಂತಹವರದಲ್ಲವೆ?. . . . ಬುಕ್ಕಣ್ಣಾ, ಜನರಲ್ಲಿ ಹುಟ್ಟಿರುವ ಸಂಕಲ್ಪವು ಯುಕ್ತವಾದುದು, ಧರ್ಮ್ಯವಾದುದು; ಅದಕ್ಕೇನೂ ಸಂಶಯವಿಲ್ಲ. ಆದರೆ ಅವರು ಸಂಕಲ್ಪಕ್ಕೆ ತಕ್ಕ ಸಾಮಗ್ರಿಯನ್ನೊದಗಿಸಿಕೊಂಡಿರುವರೆ? ಸುಲ್ತಾನನ ಪಾಳೆಯವೇನೂ ಹುಲ್ಲು ಗುಡಿಸಲಲ್ಲ. ಅದನ್ನು ನಿರ್ಮೂಲ ಮಾಡು

ವುದಕ್ಕೆ ಬಹು ದಿನದ ಸಾಹಸವೂ ಬಹು ಶಕ್ತಿವ್ಯಯವೂ ಆವಶ್ಯಕ. ನೆನೆದಾಕ್ಷಣವೆ ಅದಕ್ಕೆ ಬೇಕಾದಷ್ಟು ಜನಬಲವನ್ನೂ ಧನಬಲವನ್ನೂ ಸೃಷ್ಟಿಗೊಳಿಸಲಾಗುವುದೆ?

**ಬುಕ್ಕ**—ಆ ಸೌಕರ್ಯಗಳು ನಮಗೆ ಎಂದಿಗೂ ಉಂಟಾಗುವಂತೆ ತೋರುವುದಿಲ್ಲ. ಏತನ್ಮಧ್ಯೆ ಜನರು ಪಡುವ ಸಂಕಟ ಸಂತಾಪಗಳಿಂದ ಅವರಿಗಿರುವ ಉತ್ಸಾಹವು ಬತ್ತಿಹೋಗುವುದು ಮಾತ್ರ ನಿಶ್ಚಯ.

**ವಿದ್ಯಾ**—ಅದು ಬತ್ತದಂತೆ ಮಾಡುವುದೇ ನಿಮಗೆ ಈಗ ಇರುವ ಕೆಲಸ. ಜನರ ವಿದೇಶೀಯ ವೈರವನ್ನು ಪೋಷಿಸಿರಿ; ಅವರ ವಿಶ್ವಾಸ ವನ್ನು ಸಂಪಾದಿಸಿರಿ; ಅವರ ಧೈರ್ಯ ಶೌರ್ಯಗಳನ್ನು ಅಭಿವೃದ್ಧಿ ಗೊಳಿಸಿರಿ; ಈ ಸನ್ನಾಹವು ತಕ್ಕಷ್ಟು ನಡೆದ ಬಳಿಕ, ಸಮಯವರಿತು ಮುಂದಕ್ಕೆ ನುಗ್ಗಿರಿ; ಜಯವು ನಿಮಗೆ ಸಿದ್ಧವಾಗಿರುವುದು. ಇದೇ ಮಾತನ್ನೇ ನಾನು ಈ ಹೊತ್ತೆಲ್ಲ ಹರಿಯಣ್ಣನಿಗೆ ಹೇಳಿರುವುದು. ದೆಹಲಿಯು ಈಗ ದುರ್ಬಲವಾಗಿರುವುದೆಂಬ ವಾರ್ತೆಯು ಈಗತಾನೆ ತಿಳಿದುಬಂದಿದೆ. ಸ್ವದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಮಹಾ ಸಮಾರಂಭಕ್ಕೆ ಇದೀಗ ಕಾಲ. ಅದಕ್ಕೆ ತನ್ನ ಸರ್ವಸ್ವವನ್ನೂ ಧಾರೆ ಯೆರೆಯುವುದಾಗಿ ಹರಿಯಣ್ಣನು ಈಗತಾನೆ ನನಗೆ ವಾಗ್ದಾನ ಮಾಡಿರು ವನು. ನೀನೇನು ಹೇಳುವೆ?

**ಬುಕ್ಕ**—ಅಣ್ಣನವರ ಅಭಿಪ್ರಾಯವೂ ಶ್ರೀಪಾದದ ಅನುಜ್ಞೆಯೂ ನನ್ನ ಇಷ್ಟಕ್ಕನುಕೂಲವಾಗಿಯೇ ಇರುವಾಗ ನಾನು ಹೇಳತಕ್ಕದ್ದೇ ನಿದೆ? ನಾವೆಲ್ಲರೂ ತಮ್ಮ ಊಳಿಗದವರು; ನಮ್ಮಿಂದ ಸೇವೆ ತೆಗೆದು ಕೊಂಡು ಕಾಪಾಡುವ ಭಾರ ತಮ್ಮದು.

**ವಿದ್ಯಾ**—ಹರಿಯಪ್ಪಾ, ಏನು ಆಲೋಚಿಸುತ್ತಿರುವೆ?

**ಹರಿ**—ಗುರುದೇವ, ಇನ್ನೂ ಆಲೋಚಿಸುತ್ತಿರಲೆ? ಆಲೋ ಚನೆಯು ಆಗಲೇ ಮುಗಿಯಿತು. ಮುಂದಿನ ಕೆಲಸಕ್ಕೆ ನುಗ್ಗಬೇಕೆಂಬು ದೊಂದೇ ಈಗ ನನ್ನ ಮನಸ್ಸಿನಲ್ಲಿರುವ ಆಲೋಚನೆ. ಆಶೀರ್ವದಿಸಿ ಕಳುಹಬೇಕು. ಹೆಚ್ಚು ಹೇಳಿಕೊಳ್ಳಲಾರೆ.

**ವಿದ್ಯಾ**—(ಶಿಷ್ಯನ ಕಡೆ ತಿರುಗಿ) ರಾಮಕೃಷ್ಣ, ಒಳಗಿನಿಂದ ವಿರೂಪಾಕ್ಷ ಕರವಾಲವನ್ನೂ ಭಗವತ್ಪ್ರಸಾದವನ್ನೂ ಇಲ್ಲಿ ತಂದಿರಿಸುವೆಯಾ?

[ರಾಮಕೃಷ್ಣನು ಒಳಕ್ಕೆ ಹೋಗುವನು.

(ಹರಿಹರನ ಕಡೆ ತಿರುಗಿ)ಎಷ್ಟೋ ದಿನಗಳಿಂದ ನಾನು ಎದುರುನೋಡುತ್ತಿದ್ದ ಗಳಿಗೆ ಈಗ ಬಂದಿದೆ. ಇನ್ನು ಚಿಂತೆಯನ್ನೊತ್ತಟ್ಟಿಗಿಟ್ಟು ಕೆಲಸ ಮಾಡಬೇಕಾದ ಕಾಲ.

[ರಾಮಕೃಷ್ಣನು ಒಂದು ತಟ್ಟೆಯಲ್ಲಿ ಪುಷ್ಪಾಕ್ಷತೆಗಳನ್ನೂ ಒಂದು ಕತ್ತಿಯನ್ನೂ ತಂದು ವಿದ್ಯಾರಣ್ಯರ ಬಳಿ ಇರಿಸುವನು.]

ಹರಿಯಪ್ಪಾ, ಈ ಪ್ರಸಾದವನ್ನು ತೆಗೆದುಕೊ. ಇದು ಪುರಾತನವಾದ ಖಡ್ಗ; ಮಹಾಮಹಿಮೆಯುಳ್ಳುದು. ಇದೇ ನಿನಗೆ ವಿರೂಪಾಕ್ಷೇಶ್ವರನ ಅನುಗ್ರಹ. ಇದನ್ನು ನಂಬು; ಸರ್ವಾರ್ಥಗಳೂ ಸುಲಭವಾಗಿ ಸಿದ್ಧಿಸುವುವು.

[ಹರಿಹರ ಬುಕ್ಕರಿಬ್ಬರೂ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು ನಿಲ್ಲುವರು. ವಿದ್ಯಾರಣ್ಯರು ಪುಷ್ಪಾಕ್ಷತೆಗಳಿಂದ ಅವರಿಗಾಶೀರ್ವಾದಮಾಡಿ, ಕತ್ತಿಯನ್ನು ಹರಿಹರನ ಕೈಗೆ ಕೊಟ್ಟು]

ವಿಜಯೀಭವ, ವಿಜಯೀಭವ.

[ಹರಿಹರ ಬುಕ್ಕರು ಪುನಃ ನಮಸ್ಕರಿಸುವರು.

(ವಿದ್ಯಾರಣ್ಯರು ತ್ರ್ಯಂಬಕಶಾಸ್ತ್ರಿಗಳ ಕಡೆ ತಿರುಗಿ)

ತ್ರ್ಯಂಬಕಶಾಸ್ತ್ರಿಗಳೆ, ಅಲ್ಲಿಂದ ಶುಭವಾರ್ತೆಯನ್ನು ತಂದವರು ಇಲ್ಲಿಂದ ಶುಭವಾರ್ತೆಯಿಲ್ಲದೆ ಹಿಂದಿರುಗಬೇಕಾಗಿದ್ದುದನ್ನು ನಮ್ಮ ಹರಿಹರೇಶ್ವರನು ತಪ್ಪಿಸಿದ್ದಾನೆ. ನೀವು ಮತ್ತೆ ಶೃಂಗಗಿರಿಯನ್ನು ಸೇರಿದೊಡನೆಯೆ ಗುರುಗಳು ಹೇಳಿಕಳುಹಿಸಿದ ಸೂಚನೆಯು ಸಾರ್ಥಕವಾದೀತೆಂದು ಬಿನ್ನಯಿಸಿ, ಈ ದಿನದ ಸಂಗತಿಯನ್ನು ವಿವರಿಸುವಿರಾ?

**ತ್ರ್ಯಂಬಕ**—ಅತಿಸಂತೋಷದಿಂದ. ಅದಕ್ಕಿಂತ ಇಷ್ಟವಾದುದೇ ಸಿದ್ಧೀತು?

**ವಿದ್ಯಾ**—(ಶಿಷ್ಯನಕಡೆ ತಿರುಗಿ) ರಾಮಕೃಷ್ಣಾ, ನೀನು ಈ ದಿನವೇ ಕಾಂಚೀಪುರಕ್ಕೆ ಪ್ರಯಾಣಮಾಡಿ, ಇಲ್ಲಿ ನಡೆದ ಸಂಗತಿಯನ್ನೆಲ್ಲ ವಿಸ್ತಾರವಾಗಿ ಗುರುಗಳ ಸನ್ನಿಧಿಯಲ್ಲಿ ಅರಿಕೆಮಾಡಿ ಬರಬೇಕು.

**ರಾಮ**—ಅಪ್ಪಣೆಯಾದಂತೆ.

**ವಿದ್ಯಾ**—ಬರುವಾಗ ನಮ್ಮ ಹರಿಯಣ್ಣನಿಗಾಗಿ ಗುರುಪಾದುಕಾ ಪ್ರಸಾದವನ್ನು ತರಬೇಕು.

**ರಾಮ**—ಅಪ್ಪಣೆ.

[ಹರಿಹರ ಬುಕ್ಕರು ಪುನಃ ನಮಸ್ಕರಿಸುವರು. ತೆರೆ ಬೀಳುವುದು.]

---

## ಭಾಗ ೩—ಅಂಕುರ

### ದೃಶ್ಯ ೧

[ಆನೆಗೊಂದಿಯ ಕೋಟೆಯ ಹೊರಗಿನ ಬೈಲು. ಸೂರ್ಯೋದಯ ವೇಳೆ. ಕೋಟೆಯ ಗೋಪುರದ ಮೇಲೆ ವರಾಹ ಧ್ವಜವು ಎತ್ತರವಾಗಿ ಕಾಣುತ್ತಿರುವುದು. ಬೈಲಿನಲ್ಲಿ ಐದಾರು ಮಂದಿ ಪುರಜನರು ಗುಂಪಾಗಿ ನಿಂತು ಮಾತನಾಡುತ್ತಿರುವರು. ಮಧ್ಯೆ ಮಧ್ಯೆ ಇತರರು ಬಂದು ಸೇರಿ ಗುಂಪು ಬೆಳೆಯುವುದು.]

**೧ನೆಯವನು**—ನೋಡಿದಿರಾ, ಹೊಸ ಧ್ವಜ! ಹೇಗೆ ಆಡುತ್ತಿದೆ ನಮ್ಮ ಭೂಪನ ಧ್ವಜ!

**೨ನೆಯವನು**—ಆ ಮಹಾರಾಯನ ಧ್ವಜ ಎಲ್ಲ ಕಾಲವೂ ಹೀಗೆಯೇ ಆಡುತ್ತಿರಲಿ!

**೩ನೆಯವನು**—ನಮ್ಮಪ್ಪ ವಿರೂಪಾಕ್ಷೇಶ್ವರನು ಆ ಮಹಾರಾಯನಿಗೆ ನೂರು ವರ್ಷ ಆಯುಸ್ಸನ್ನು ಕೊಡಲಿ.

**ಇತರರು**—

ದೀರ್ಘಾಯುವನ್ನು ಕೊಡಲಿ!
ಎಲ್ಲ ಸಂಪತ್ತನ್ನೂ ಕೊಡಲಿ!
ಎಲ್ಲ ಕಡೆಯೂ ಯಶಸ್ಸನ್ನೂ
ಎಲ್ಲ ಕಾಲವೂ ಜಯವನ್ನೂ ಕೊಡಲಿ!

**೧ನೆಯವನು**—ಆದರೂ ನಮ್ಮ ಹರಿಯಪ್ಪನವರು ಎಂಥಾ ಅದ್ಭುತ ಕಾರ್ಯವನ್ನು ಮಾಡಿದರು!

**೨ನೆಯವನು**—ಆತನು ಇಂಥಾ ಸಾಹಸಿ, ಇಂಥಾ ಪರಾಕ್ರಮಿ ಎಂದು ನಮಗಾರಿಗೂ ತಿಳಿದಿರಲಿಲ್ಲ,—ತಿಳಿದಿತ್ತೆ?

**೪ ನೆಯವನು**—ಸಾಹಸವೇನಯ್ಯಾ? ಎಲ್ಲಾ ಕಾಲಮಹಿಮೆ. ಒಳ್ಳೆಯ ಘಳಿಗೆ ಬಂದರೆ ಸರಿ; ಸಾಹಸ, ಪರಾಕ್ರಮ, ಶಕ್ತಿ, ಯುಕ್ತಿ— ಎಲ್ಲವೂ ತಾವಾಗಿ ಬರುತ್ತವೆ.

**೩ ನೆಯವನು**—ಓಹೋ! ಹಾಗೋ ಅದು? ಹಾಗಾದರೆ ಅವೆಲ್ಲ ತಮಗೂ ನಮಗೂ ನಿನ್ನೆ ಮೊನ್ನೆ ಏಕೆ ಬರಲಿಲ್ಲವೋ? ಹರಿಯಪ್ಪನವರೂ ಅವರ ಜನರೂ ಇಲ್ಲಿ ಆ ಹಾಳು ತುರುಕರೊಡನೆ ಹೋರಾಡುತ್ತಿದ್ದಾಗ ನೀವೂ ನಾವೂ ಎಲ್ಲಿ ಹೋಗಿದ್ದೆವೋ? ಹೋರಾಟ ಮುಗಿದು ಎಲ್ಲವೂ ಸುಮುಖವಾಗಿರುವುದೆಂದು ತಿಳಿದಮೇಲೆ, ಈಗೀಗಲ್ಲವೆ ನಾವು ಬಿಲದೊಳಗಿನ ಇಲಿಗಳಂತೆ ಇಲ್ಲಿ ಸುಳಿಯುತ್ತಿರುವುದು? ಇಂಥವರೇ ಅಲ್ಲವೆ ಹರಿಯಪ್ಪನವರನ್ನು ಅಲ್ಲಗಳೆಯಬೇಕಾದವರು?

**೪ ನೆಯವನು**—ನಾನೇನೂ ಅಲ್ಲಗಳೆಯಲಿಲ್ಲವಪ್ಪಾ! ಅದೇಕೆ ಹಾಗೆ ತಿಳಿದುಕೊಂಡೆ? ಎಲ್ಲವೂ ಈಶ್ವರ ಕೃಪೆ ಎಂದು ಮಾತ್ರವೇ ನಾನು ಹೇಳಿದುದು.

**೫ ನೆಯವನು**—ಅದು ನಿಜ. (ಪಂಪಾಪತಿಯ ದಯೆ ಬಂತು; ಬೆಟ್ಟದ ಹಾಗೆ ಕುಳಿತಿದ್ದ ಪೀಡೆ ಮೋಡದ ಹಾಗೆ ಹಾರಿಹೋಯಿತು.)

**೩ ನೆಯವನು**—ಅದಿರಲಿ, ಈ ಧ್ವಜವನ್ನು ಇಲ್ಲಿ ನೆಟ್ಟುದಾವಾಗ?

**೨ ನೆಯವನು**—ನಿನ್ನೆ ಸಾಯಂಕಾಲವೆಂದು ತೋರುತ್ತದೆ.

**೧ ನೆಯವನು**—ಇಲ್ಲ ಇಲ್ಲ; ನಿನ್ನೆ ಬೆಳಗಾಗುತ್ತಲೇ ಇರಬೇಕು. ಏಕೆನ್ನುವಿರೋ, ಹರಿಯಪ್ಪನವರಿಗೆ ಯಾರೋ ಸಂನ್ಯಾಸಿ ಗುರುವಿರುವರಂತೆ. ಅವರು ಯಾವುದೋ ಮಂತ್ರವನ್ನು ಹರಿಯಪ್ಪನವರಿಗೆ ಉಪದೇಶ ಮಾಡಿದ್ದಾರೆಯಂತೆ. ಆ ಮಂತ್ರದ ಮಹಿಮೆಯಿಂದ ಹರಿಯಪ್ಪನವರು ಎಲ್ಲಿಗಾದರೂ ಅರ್ಧರಾತ್ರಿಯಲ್ಲಾದರೂ ನಿರ್ಭಯವಾಗಿ ಹೋಗಲಾಗುವುದಂತೆ. ಬಹುಶಃ ಅದರ ಬಲದಿಂದ ಮೊನ್ನೆ ರಾತ್ರಿಯೇ ಅವರು ನವಾಬನ ಅರಮನೆಗೆ ನುಗ್ಗಿ ಅವನನ್ನು ಹಿಡಿದಿರಬೇಕು. ಆಮೇಲೆ ನಿನ್ನೆ ಹೊತ್ತು ಹುಟ್ಟುವ ವೇಳೆಗೆ ಅವನ ಧ್ವಜವನ್ನು ಕಿತ್ತೆಸೆದು ತಮ್ಮ ಧ್ವಜವನ್ನು ನೆಟ್ಟಿರಬೇಕು.

**೫ ನೆಯವನು**—ಹಾಗಿರಬಹುದು, ಹಾಗೆಯೇ ಇರಬಹುದು.

**೬ ನೆಯವನು**—ಹಾಗಿರಲಾರದು ; ಬಹುಶಃ ಧ್ವಜವನ್ನು ಮೊನ್ನೆ ಮಧ್ಯಾಹ್ನವೇ ನೆಟ್ಟಿರಬೇಕು. ಏಕೆಂದರೆ, ಮೂರು ನಾಲ್ಕು ದಿನಗಳ ಹಿಂದೆ ತುರುಕರೇನೋ ಹಬ್ಬಮಾಡಿದರಲ್ಲವೆ? ಅವರ ಊಟ ಉಪಚಾರ ಗಳಿಗಾಗಿ ಪದಾರ್ಥಗಳು ಬಂಡಿ ಬಂಡಿಗಳಾಗಿ ಹೋಗುತ್ತಿದ್ದುದನ್ನು ನೀವು ನೋಡಲಿಲ್ಲವೆ? ಅವರಿಗೆ ಇಂಥಾ ಉತ್ಸವವೇನಾದರೂ ಬಂದರೆ ಮೈಮೇಲೆ ಸ್ಮೃತಿಯಿರುವುದಿಲ್ಲ. ಅವರ ಸಂಗೀತ ಸಲ್ಲಾಪಗಳ ಸದ್ದು ಊರೆಲ್ಲ ಕೇಳಬರುವುದಿಲ್ಲವೆ? ಬಹುಶಃ ಹಬ್ಬದ ರಾತ್ರಿಯೆಲ್ಲಾ ಅವರು ತಿಂದು, ಕುಡಿದು, ಕುಣಿದು, ದಣಿದಿರಬೇಕು. ಮಾರಣೆಯದಿನ ಮುಂಜಾನೆ ಅವರು ಮತ್ತೇರಿ ಮೈಮರೆತು ಬಿದ್ದಿದ್ದ ಸಮಯವನ್ನು ನೋಡಿ ನಮ್ಮವರು ಅವರ ಮೇಲೆ ನುಗ್ಗಿರಬೇಕು. ಆಮೇಲೆಷ್ಟು ಹೊತ್ತು? ಮಧ್ಯಾಹ್ನದೊಳಗಾಗಿಯೇ ಕೋಟೆಯು ನಮ್ಮವರಿಗೆ ಕೈವಶವಾಗಿರಬೇಕು.

**೫ ನೆಯವನು**—ಹೀಗೂ ಇರಬಹುದು. ಹೇಗಾದರೇನು? ಸದ್ಯಃ ನಮ್ಮ ಹಿಂದೂ ರಾಜ್ಯಕ್ಕೆ ಪುನರ್ಜನ್ಮ ಬಂದಿರುವುದು ನಿಜವಷ್ಟೆ?

**೩ ನೆಯವನು**—ಅದಕ್ಕೇನು ಸಂದೇಹ? ಹುವ್ವು ಹಾಕುವ ತಟ್ಟೆಯಲ್ಲಿ ಹುಲ್ಲು ತುಂಬಿದ್ದುದು ಹೋಗಿ ಹುವ್ವೇ ತುಂಬಿದಂತಾಯಿತು. ಇದು ಹರಿಯಪ್ಪನವರ ಕೀರ್ತಿ, ನಮ್ಮೆಲ್ಲರ ಭಾಗ್ಯ.

**೭ ನೆಯವನು**—ಅದೇನೋ ಸರಿ. ಆದರೆ ಇದು ಶಾಶ್ವತವಾಗಿ ನಿಲ್ಲುವುದೆಂದು ನಂಬುವುದು ಹೇಗೆ?

**೬ ನೆಯವನು**—ಏನಯ್ಯಾ, ಇನ್ನೂ ಭಯ ನಿನಗೆ?

**೭ ನೆಯವನು**—ಏನೆಂದರೆ, ಇಲ್ಲಿಯ ಶತ್ರುವು ಹತನಾದರೂ, ಅವನ ಮಾತೃಸ್ಥಾನವಾದ ದೆಹಲಿ ಇನ್ನೂ ಹಾಗೆಯೇ ಇರುವುದಲ್ಲ! ಅಲ್ಲಿಂದ ಆ ಹಾಳು ನರರಾಕ್ಷಸರ ಪ್ರವಾಹವು ಪುನಃ ಬಂದರೆ . . . . ? ಅವರೇನು, ನಮ್ಮ ಪುರಾಣದಲ್ಲಿ ಹೇಳಿರುವ ರಕ್ತಬೀಜಾಸುರನ ಹಾಗೆ;

ಒಂದೊಂದು ತೊಟ್ಟು ರಕ್ತದಿಂದ ಒಬ್ಬೊಬ್ಬ ಹೊಸ ರಕ್ಕಸನನ್ನು ಹುಟ್ಟಿ ಸತಕ್ಕವರಲ್ಲವೆ?

**೫ನೆಯುವನು**—ಇದು ಒಳ್ಳೆಯ ಭಯ! ಹೀಗೆ ನಾವು ಯಾವಾಗಲೂ ಎದೆಗುಂದಿ ಮೈಯುಡುಗಿಸಿಕೊಂಡಿರಬೇಕಾದರೆ, ಹಾಗೆ ಬದುಕುವುದಕ್ಕಿಂತ ಒಂದೇಸಾರಿ ಪ್ರಾಣ ಬಿಡುವುದೇ ಸುಖ.

[ಪ್ರವೇಶ: ತ್ರಿವಿಕ್ರಮಶಾಸ್ತ್ರಿ.]

**೧ನೆಯುವನು**—ಓಹೋ, ತ್ರಿವಿಕ್ರಮಶಾಸ್ತ್ರಿಗಳೆ, ಬನ್ನಿರಿ ಬನ್ನಿರಿ; ನೀವು ಸರ್ವವ್ಯಾಪಕರು. ನಿಮಗೆ ತಿಳಿಯದ ಸಮಾಚಾರ ಯಾವುದೂ ಇರದು. ಈಗ ವಿಶೇಷ ಸಂಗತಿಯೇನು?

**ತ್ರಿವಿಕ್ರಮ**—ಇನ್ನೂ ತಿಳಿಯದೆ? ಇಲ್ಲಿಯೇ ಕಾದಿರಿ; ಸ್ವಲ್ಪ ಹೊತ್ತಿನಲ್ಲಿಯೇ ತಿಳಿಯುವುದು.

**೨ನೆಯುವನು**—ಅದೇನು, ಹೇಳಕೂಡದೆ?

**ತ್ರಿವಿಕ್ರಮ**—ಗೊತ್ತಿಲ್ಲವೆ? ನಮ್ಮ ಹರಿಹರ ಮಹಾರಾಜರು ಈ ಮಾರ್ಗವಾಗಿ ವಿರೂಪಾಕ್ಷೇಶ್ವರನ ಸನ್ನಿಧಿಗೆ ಹೋಗುವರು. ಅಲ್ಲಿ ಸ್ವಾಮಿಯ ಸೇವೆಮಾಡಿ ಆಮೇಲೆ ಆ ಬಳಿ ನೂತನ ನಗರ ನಿರ್ಮಾಣಕ್ಕೆ ಶಂಕುಸ್ಥಾಪನೆ ಮಾಡುವರು.

**ಎಲ್ಲರೂ**—(ವಿಸ್ಮಿತರಾಗಿ) ಓಹೋ!

**೧ನೆಯುವನು**—(೭ನೆಯುವನನ್ನು ಕುರಿತು) ಕೇಳಿದೆಯಾ? ಪುನಃ ತುರುಕರು ಬರುವ ಭಯವಿದ್ದಿದ್ದರೆ ಈ ಪ್ರಯತ್ನ ನಡೆಯುತ್ತಿತ್ತೆ?

**ತ್ರಿವಿಕ್ರಮ**—ಆ ಭಯವೆಂದೆಂದಿಗೂ ಇಲ್ಲದೆ ಹೋಗಬೇಕೆಂದೇ ಹೊಸ ರಾಜಧಾನಿಯನ್ನೂ ಹೊಸ ಕೋಟೆಯನ್ನೂ ಆ ಸ್ಥಳದಲ್ಲಿ ಕಟ್ಟುವುದು. ಅದು ಮಹಾಮಹಿಮೆಯುಳ್ಳ ಸ್ಥಳ. ಅಲ್ಲಿ ನಿರ್ಮಿತವಾದ ಪಟ್ಟಣವು ಅಭೇದ್ಯವಾಗಿ, ಯಾವ ಬಾಧೆಯೂ ಇಲ್ಲದೆ ನಿಂತಿರುವುದು.

**೪ನೆಯುವನು**—ಹಾಗೆಂದು ಹೇಳಿದವರಾರೋ?

**ತ್ರಿವಿಕ್ರಮ**—ರಾಜಗುರುಗಳು, ವಿದ್ಯಾರಣ್ಯ ಸ್ವಾಮಿಗಳು?

**೭ನೆಯವನು**—ಅವರಿಗಾರು ಹೇಳಿದರೋ?

**ತ್ರಿವಿಕ್ರಮ**—ಓಹೋ, ನಿಮಗೇನೂ ತಿಳಿಯದು! ಹೇಳುತ್ತೇನೆ ಕೇಳಿ. ಒಂದು ದಿನ ಹರಿಹರರಾಯರೂ ಅವರ ತಮ್ಮಂದಿರು ನಾಲ್ವರೂ ಬೇಟೆಯಾಡಿ ಹಿಂದುರುಗಿ ಬರುತ್ತಿದ್ದರಂತೆ. ಅವರು ತುಂಗಭದ್ರೆಯ ತೀರದಲ್ಲಿ ಸುತ್ತುತ್ತಿದ್ದಾಗ ಅವರ ಬೇಟೆ ನಾಯಿಗಳನ್ನು ಕೆಲವು ಮೊಲಗಳು ಅಟ್ಟಿ ಬಂದು ಹಿಡಿದುಕೊಂಡುವಂತೆ. ಹುಲಿ ಚಿರತೆ ಮೊದಲಾದ ಕ್ರೂರ ಮೃಗಗಳನ್ನು ಹಿಡಿದುಕೊಟ್ಟು, ಕಾಲಭೈರವ ಸೈನ್ಯದಂತೆ ಮೆರೆಯುತ್ತಿದ್ದ ಆ ನಾಯಿಗಳನ್ನು ಮೊಲಗಳೆಲ್ಲಿಯಾದರೂ ಹಿಡಿಯುವುದುಂಟೆ?

**ಎಲ್ಲರೂ**—ಉಂಟೇ?......ಎಂದಿಗೂ ಹಾಗಾಗಲಾರದು!

**ತ್ರಿವಿಕ್ರಮ**—ಆದರೂ ಆ ದಿನ ಅಲ್ಲಿ ಹಾಗೆ ಆಯಿತಂತೆ. ಆ ವಿಚಿತ್ರವನ್ನು ಕಂಡ ಹರಿಹರರಾಯರು ಒಡನೆಯೆ ವಿದ್ಯಾರಣ್ಯರ ಆಶ್ರಮಕ್ಕೆ ಹೋಗಿ, ಅದನ್ನು ಅವರಿಗೆ ಅರಿಕೆ ಮಾಡಿದರಂತೆ. ಅವರು ಮುಹೂರ್ತ ಮಾತ್ರ ಧ್ಯಾನಮಾಡಿ, ಆ ಸ್ಥಳವು ವಿಶೇಷ ಮಾಹಾತ್ಮ್ಯವುಳ್ಳದೆಂದೂ ಅದು ಹರಿಹರರಾಯರಿಗೆ ಜಯಪ್ರದವಾಗುವುದೆಂದೂ ಹೇಳಿದರಂತೆ. ಅವರೇ ಈ ದಿನ ಅಲ್ಲಿ ಶಂಕುಸ್ಥಾಪನೆಯಾಗಬೇಕೆಂದು ನಿಷ್ಕರ್ಷೆ ಮಾಡಿರುವರು. ಅವರು ತಾವೇ ಬಂದು ಆ ಉತ್ಸವವನ್ನು ಆಗಮಾಡಿಸುವರು. ಅವರ ಹೆಸರನ್ನೇ ಆ ಪಟ್ಟಣಕ್ಕಿಟ್ಟು ಅದನ್ನು ವಿದ್ಯಾನಗರವೆಂದು ಕರೆಯುವಂತೆ ಮಹಾರಾಜರು ನಿಶ್ಚಯಿಸಿರುವರು.

**ಎಲ್ಲರೂ**—ಚೆನ್ನಾಯಿತು!

ಬಹಳ ಚೆನ್ನಾಯಿತು!!

**೩ನೆಯವನು**—ನಿಶ್ಚಯವೇನೋ ಒಳ್ಳೆಯದೇ ಸರಿ; ಆದರೆ ಹಣವೆಲ್ಲಿದೆ? ಹೊಸದಾಗಿ ಕೋಟೆ ಕೊತ್ತಲಗಳನ್ನು ಕಟ್ಟಬೇಕಾದರೆ ಎಷ್ಟೋ ದ್ರವ್ಯ ಬೇಕಾಗುವುದಲ್ಲ!

**ತ್ರಿವಿಕ್ರಮ**—ವಿದ್ಯಾರಣ್ಯರನ್ನೇನೆಂದು ತಿಳಿದೆ? ಅವರು ಮಹಾ ತಪಸ್ವಿಗಳು. ಭುವನೇಶ್ವರೀ ದೇವಿಯೇ ಅವರ ವಶದಲ್ಲಿರುವಳು! ನೂತನ ನಗರ ಪ್ರತಿಷ್ಠೆಗೋಸ್ಕರವೂ, ಜನರ ಉಚ್ಛ್ರಾಯಕ್ಕೋಸ್ಕರವೂ ಅವರು ಆ ದೇವತೆಯನ್ನು ಪ್ರಾರ್ಥಿಸಿ, ಸುವರ್ಣವೃಷ್ಟಿ ಮಾಡಿ ಸುವರಂತೆ ?

**೬ ನೆಯುವನು**—ಆಹಾ, ಇದೇನು ಕೃತಯುಗದ ಕಥೆಯಂತೆ ಇದೆ!

**೭ ನೆಯುವನು**—ಶಾಸ್ತ್ರಿಗಳೇ, ನನಗೆ ಇನ್ನೊಂದು ಸಂದೇಹ ಪರಿಹಾರವಾಗಬೇಕಾಗಿದೆಯಲ್ಲ.

**ತ್ರಿವಿಕ್ರಮ**—ಏನದು ?

**೭ ನೆಯುವನು**—ಇಷ್ಟೊಂದು ಸಾಹಸ ಸಂಭ್ರಮಗಳಿಂದ ಹುಟ್ಟುವ ರಾಜ್ಯಕ್ಕೆ ಹಂದಿಯನ್ನೇನೆಂದು ಬಿರುದಾಗಿಟ್ಟುಕೊಂಡರು ?

**೫ ನೆಯುವನು**—ಛೀ ! ಛೀ !! ಇದೇನು ?

**ಎಲ್ಲರೂ**—ಛೀ ! ಛೀ !! ಹಾಗೆನ್ನಬಹುದೆ?

**೫ ನೆಯುವನು**—ಇರಲಿ ! ವರಾಹವು ತುರುಷ್ಕರಿಗೆ ವಿರೋಧಿಯೆಂಬುದು ತಿಳಿಯದೇನಯ್ಯಾ? ಎಂಥಾ ಬುದ್ಧಿಶಾಲಿ ನೀನು !

**ತ್ರಿವಿಕ್ರಮ**—ಹಾಗಲ್ಲ. ಪೂರ್ವಕಾಲದಲ್ಲಿ ಹಿರಣ್ಯಾಕ್ಷನು ಭೂಮಂಡಲವನ್ನು ಪಾತಾಳಕ್ಕೆ ತುಳಿದುಹಾಕಿದ್ದಾಗ ಈ ಲೋಕವನ್ನುದ್ಧಾರ ಮಾಡಿದವರಾರು ?

**೭ ನೆಯುವನು**—ಓಹೋ ತಿಳಿಯಿತು !

**ಎಲ್ಲರೂ**—ತಿಳಿಯಿತು, ತಿಳಿಯಿತು ; ವರಾಹದೇವರಲ್ಲವೆ?

**ತ್ರಿವಿಕ್ರಮ**—ಈಗ ನಮ್ಮ ಹರಿಹರ ಮಹಾರಾಜನು ಹಾಗೆಯೇ ಲೋಕವನ್ನುದ್ಧಾರಮಾಡಿ ನಮ್ಮನ್ನು ಕಾಪಾಡತಕ್ಕವನಾಗಿರುವನು. ಅಂಥಾ ದೊರೆಗೆ ವರಾಹಾವತಾರವಲ್ಲದೆ ತಕ್ಕ ಲಾಂಛನವಿನ್ನಾವುದು ?

**ಒನೆಯವನು**—ಒಪ್ಪಿದೆ.

**ಎಲ್ಲರೂ**—ಒಪ್ಪಿದೆವು! ಒಪ್ಪಿದೆವು!!

[ವಾದ್ಯ ಘೋಷ.]

**ತ್ರಿವಿಕ್ರಮ**—ಓಹೋ, ಉತ್ಸವವು ಸಮೀಪಕ್ಕೆ ಬರುತ್ತಿದೆ. ನಾನು ಬೇಗ ಬೇಗ ಮುಂದೆ ಹೋಗಬೇಕು. [ಹೋಗುವನು.

**ಎಲ್ಲರೂ**—ನಾವೂ ಮೆರೆವಣಿಗೆಯಲ್ಲಿ ಸೇರಿ ಈ ಮಹಾಸಂಭ್ರಮದಿಂದ ಕಣ್ಮನಗಳನ್ನು ತೃಪ್ತಿಪಡಿಸಿಕೊಳ್ಳೋಣ. [ಎಲ್ಲರೂ ಕುತೂಹಲದಿಂದ ನೋಡುತ್ತಿರುವರು.

[ಪ್ರವೇಶ: ಗೀತ ವಾದ್ಯಗಳಿಂದೊಡಗೂಡಿದ ಮೆರೆವಣಿಗೆ; ವರಾಹ ಧ್ವಜ, ವಂದಿಮಾಗಧರು, ಹರಿಹರರಾಜನು, ಆತನ ನಾಲ್ವರು ತಮ್ಮಂದಿರು, ಅರಸು ಮಕ್ಕಳು, ಸೇನಾಪತಿಗಳು, ಸಾಯಣ ಪ್ರಮುಖರಾದ ಬ್ರಾಹ್ಮಣರು, ಪುರಜನರು, ಮೊದಲಾದವರು.]

**ಒಬ್ಬ ವಂದಿ**—ಜಯಶ್ರೀ ವೀರ ಹರಿಹರ ಮಹಾರಾಜ, ಪರಾಕು!

**ಇನ್ನೊಬ್ಬ ವಂದಿ**—ಆದಿವರಾಹ ನಿಕೇತನ, ಪರಾಕು!

**ಮತ್ತೊಬ್ಬ ವಂದಿ**—ಅರಿರಾಯವಿಭಾಳ, ಪರಾಕು!

**ಇನ್ನೊಬ್ಬ ವಂದಿ**—ಕರ್ಣಾಟ ಸಿಂಹಾಸನಾಧೀಶ್ವರ, ಪರಾಕು!

**ಮತ್ತೊಬ್ಬ ವಂದಿ**—ಹಿಂದೂರಾಯ ಸುರತ್ರಾಣ, ಪರಾಕು!
ಬಹು ಪರಾಕು!!

[ಪುರಜನರ ಗುಂಪು ಸಾಗಿಬರುತ್ತಿರಲು ತೆರೆ ಬೀಳುವುದು.

---

## ದೃಶ್ಯ ೨

[ವಿದ್ಯಾನಗರದ ಅರಮನೆಯಲ್ಲಿ ಮಂತ್ರಾಲೋಚನೆಯ ಕೋಣೆ. ಹರಿಹರ ಮಹಾರಾಜನೂ ವಿದ್ಯಾರಣ್ಯರೂ ಕುಳಿತು ಮಾತನಾಡುತ್ತಿರುವರು.]

**ಹರಿಹರ**—ಗುರುದೇವ, ನನ್ನ ತಲೆಯಮೇಲೆ ದೊಡ್ಡ ಭಾರವನ್ನು ಹೊರಿಸಿರುವಿರಿ. ಆ ದಿನ ನನ್ನಿಂದ ಭಿಕ್ಷೆ ಬೇಡಿದವರಂತೆ ಲೀಲೆತೋರಿ,

ಈಗ ತಾವೇ ನನಗೆ ಭಿಕ್ಷ ವಿಟ್ಟಿರುವಿರಿ. ಭೀರುವಾಗಿದ್ದವನನ್ನು ಧೀರನೆ ನಿಸಿದಿರಿ; ಪರಸೈನ್ಯದಲ್ಲಿ ಭಟನಾಗಿದ್ದವನನ್ನು ಸ್ವತಂತ್ರ ಸಿಂಹಾಸನಾಧಿ ಪತಿಯಾಗಿ ಮಾಡಿದಿರಿ; ದಿಕ್ಕುಗೆಟ್ಟು ಅಲೆಯುತ್ತಿದ್ದವನಿಗೆ ಸಾಮ್ರಾಜ್ಯ ಪಟ್ಟವನ್ನು ಕಟ್ಟಿರುವಿರಿ. ಇಂತಹವರಿಗೆ ಹೇಗೆ ಸೇವೆ ಮಾಡಿದರೆ ತಾನೆ ನನ್ನ ಋಣವು ತೀರೀತು? ನನ್ನ ತಲೆಯ ಮೇಲಿರಿಸಿರುವ ಭಾರವನ್ನು ನೆನೆದುಕೊಂಡರೆ ಮನಸ್ಸು ಸ್ತಬ್ಧವಾಗಿ ಬಾಯಿ ಕಟ್ಟಿಹೋಗುತ್ತದೆ.

**ವಿದ್ಯಾರಣ್ಯ**—ಹರಿಹರೇಶ್ವರಾ, ನೀನು ಪೌರುಷವನ್ನು ತೋರದೆ, ಧರ್ಮೋತ್ಸಾಹವಿಲ್ಲದವನಾಗಿ ಇದ್ದಿದ್ದರೆ ಇದೊಂದೂ ಆಗುತ್ತಿರಲಿಲ್ಲ. ಅದು ಹಾಗಿರಲಿ. ರಾಜನಾದ ಶಿಷ್ಯನಿಂದ ಗುರುವು ಬಯಸುವ ದಕ್ಷಿಣೆಯು ಧರ್ಮ ಪರಿಪಾಲನೆಯೊಂದೇ. ಜನರ ಇಹಪರ ಸುಖಗಳಿಗೆ ಒದಗಿರುವ ಬಾಧಕಗಳನ್ನು ನಿವಾರಿಸಿ, ಒದಗಬೇಕಾಗಿರುವ ಸಾಧಕಗಳನ್ನು ಕಲ್ಪಿಸಿ, ಜ್ಞಾನವೂ ಭಕ್ತಿಯೂ ಸೌಜನ್ಯವೂ ಲೋಕದಲ್ಲಿ ಹೆಚ್ಚುವಂತೆ ಮಾಡುವುದೇ ರಾಜನ ಕರ್ತವ್ಯ. ನಿನ್ನ ರಾಜ್ಯವೆಲ್ಲಾ ಒಂದು ದೇವಾಲಯವಾಗಿರಲಿ; ಧರ್ಮವೇ ಅದರಲ್ಲಿ ಪೂಜೆ ಮಾಡಿಸಿಕೊಳ್ಳುವ ದೇವತೆಯಾಗಿರಲಿ. ಇದನ್ನು ನೀನು ತಿಳಿದು, ಖಿಲವಾಗಿರುವ ವೇದಮತವನ್ನುದ್ಧಾರಮಾಡಿ, ಖಿನ್ನರಾಗಿರುವ ಹಿಂದೂ ಜನರನ್ನು ಉನ್ನತಿಗೊಳಿಸಿದರೆ, ಅದರಿಂದ ನನಗುಂಟಾಗುವ ಸಂತೋಷವು ಮತ್ತಾವುದರಿಂದಲೂ ಆಗದು.

**ಹರಿ**—ಗುರುದೇವ, ನಾನು ನೆರವೇರಿಸಬೇಕಾಗಿರುವ ಕಾರ್ಯದ ಕ್ರಮವನ್ನು ಆಜ್ಞಾಪಿಸಬೇಕು. ನನ್ನದೆಂದು ತಾವು ಗೊತ್ತುಮಾಡಿರುವ ಈ ಸಿಂಹಾಸನವೂ ಇದರ ವೈಭವವೂ ಎಲ್ಲವೂ ತಮ್ಮ ಪಾದಧೂಳಿಯ ಪ್ರಭಾವವಾಗಿರುವಲ್ಲಿ, ಈ ಶಕ್ತಿ ಸಂಪತ್ತುಗಳನ್ನು ತಮ್ಮ ಸಂಕಲ್ಪ ಸಾಧನೆಗಲ್ಲದಿದ್ದರೆ ಮತ್ತಾವುದಕ್ಕೆ ವಿನಯೋಗಿಸಲಿ? ಈ ರಾಜ್ಯವು ತಮ್ಮದು.

**ವಿದ್ಯಾ**—ರಾಜ್ಯವು ನನ್ನದೂ ಅಲ್ಲ; ನಿನ್ನದೂ ಅಲ್ಲ; ವಿರೂಪಾಕ್ಷೇಶ್ವರನದೆಂದು ತಿಳಿ.

**ಹರಿ**—ಅದೇ ನನ್ನ ಮನಸ್ಸಿನ ಅಂತರ್ಯದ ನಂಬಿಕೆ. ನನಗೆ ತಾವು ಬೇರೆಯಲ್ಲ, ವಿರೂಪಾಕ್ಷ ಸ್ವಾಮಿ ಬೇರೆಯಲ್ಲ.

**ವಿದ್ಯಾ**—ಹರಿಯಪ್ಪಾ, ಇದುವರೆಗೂ ನೀನು ಮಾಡಿರುವ ಕೆಲಸವೆಲ್ಲ ಇನ್ನು ಮುಂದೆ ನೀನು ಮಾಡಬೇಕಾಗಿರುವ ಕರ್ತವ್ಯಕ್ಕೆ ಅಂಕುರಾರ್ಪಣ ಮಾತ್ರವಾಗಿದೆ. ರಾಜ್ಯವನ್ನು ಸಂಪಾದಿಸಿದುದು ನಿನ್ನ ಸಾಹಸ, ನಿನ್ನ ತಮ್ಮಂದಿರ ಭುಜಬಲ. ಅದನ್ನು ಉಳಿಸಿ ಕಾಪಾಡಿ ಕೀರ್ತಿ ತರತಕ್ಕ ಗುಣಗಳು ಬೇರೆ. ವಿವೇಕ, ಸಹನೆ, ದೂರದೃಷ್ಟಿ, ಧರ್ಮೈಕಪರತೆ—ಇವು ರಾಜ್ಯದ ಸಂಸ್ಥಿತಿಗೆ ಅವಶ್ಯವಾದುವು. ಈ ಗುಣಗಳ ಅಭ್ಯಾಸವು ಕಷ್ಟತರವಾದುದು. ರಾಜ್ಯ ಸಂಪಾದನೆಯು ಒಂದೆರಡು ವರ್ಷಗಳ ಕೆಲಸ; ರಾಜ್ಯ ಪರಿಪಾಲನೆಯು ಎಲ್ಲ ಕಾಲದ ಕೆಲಸ. ನೀನೂ, ನಿನ್ನ ಮಂತ್ರಿ ವರ್ಗವೂ, ನಿನ್ನ ಮಂಡಲಾಧಿಕಾರಿಗಳೂ, ನಿನ್ನ ದಂಡಾಧಿನಾಥರೂ ಎದುವರೆಗೂ ಈ ರಾಜ್ಯವು ವಿರೂಪಾಕ್ಷನದೆಂದು ತಿಳಿದು, ನೀವು ಮಾಡುವ ಕೆಲಸಗಳೆಲ್ಲವೂ ಆ ಸ್ವಾಮಿಯೊಪ್ಪುವಂತಹವುಗಳಾಗಿರ ಬೇಕೆಂದು ವ್ರತಹಿಡಿದಿರುವಿರೋ, ಅದುವರೆಗೂ ನಿನಗೇನೂ ಭಯವಿರದು; ನಿನ್ನ ರಾಜ್ಯಕ್ಕಾವ ಚ್ಯುತಿಯೂ ಬಾರದು.

**ಹರಿ**—ಗುರುವೆ, ಅದೇ ನನ್ನ ವ್ರತ.

**ವಿದ್ಯಾ**—ಹಾಗಾದರೆ ನಿನ್ನ ಎಲ್ಲ ರಾಜ್ಯ ಪತ್ರಗಳಲ್ಲಿಯೂ, ಎಲ್ಲ ರಾಜ್ಯ ಶಾಸನಗಳಲ್ಲಿಯೂ ವಿರೂಪಾಕ್ಷೇಶ್ವರನ ಅಂಕಿತವನ್ನು ಹಾಕಿ ಆತನೇ ಸಾರ್ವಭೌಮನೆಂದು ಸಾರುವೆಯಾ?

**ಹರಿ**—ಅದಕ್ಕೇನು ತಡೆ? ಸಂತೋಷದಿಂದ ಹಾಗೆ ಮಾಡುವೆನು.

[ಪ್ರವೇಶ: ಕಂಚುಕಿ.]

**ಕಂಚುಕಿ**—ಬ್ರಾಹ್ಮಣರಿರ್ವರು ಶೃಂಗಗಿರಿಯಿಂದ ರಾಜ ಸಂದರ್ಶನಕ್ಕೆಂದು ಬಂದಿರುವರು.

**ಹರಿ**—ಒಳಕ್ಕೆ ಕರೆದುಕೊಂಡು ಬಾ.

**ಕಂಚುಕಿ**—ಅಪ್ಪಣೆ. [ಕಂಚುಕಿಯು ಹೋಗುವನು.

**ವಿದ್ಯಾ**—ಹರಿಹರೇಶ್ವರಾ, ನೀನಾಗಿ ಬೇಡಲು ಹೋಗಬೇಕಾಗಿದ್ದ ಗುರುಪ್ರಸಾದವು ನೀನಿರುವೆಡೆಗೇ ಬಂದಂತಿದೆ.

[ಇಬ್ಬರು ಬ್ರಾಹ್ಮಣರು ಕಂಚುಕಿಯೊಡನೆ ಪ್ರವೇಶಿಸುವರು. ಅವರನ್ನು ಎದುರ್ಗೊಳ್ಳಲು ಹರಿಹರರಾಜನು ಎದ್ದುನಿಲ್ಲುವನು. ಅವರು ವಿದ್ಯಾರಣ್ಯರನ್ನು ಕಂಡು ಸಾಷ್ಟಾಂಗ ಪ್ರಣಾಮಮಾಡಿ ಎದ್ದುನಿಲ್ಲುವರು.]

**ವಿದ್ಯಾ**—ತ್ರ್ಯಂಬಕಶಾಸ್ತ್ರಿಗಳೆ, ಚಂದ್ರಶೇಖರ ದೀಕ್ಷಿತರೆ, ಯಾವಾಗ ಬಂದಿರಿ? ಸಕಲರೂ ಕ್ಷೇಮಿಗಳಷ್ಟೆ?

**ತ್ರ್ಯಂಬಕ**—ಚಂದ್ರಶೇಖರ ದೀಕ್ಷಿತರು ಕಂಚಿಯಿಂದ ಶೃಂಗಗಿರಿಗೆ ಬಂದು ಒಂದು ವಾರವಾಯಿತು. ನಾವಿಬ್ಬರೂ ಇಲ್ಲಿಗೆ ಈಗ ತಾನೆ ಬಂದೆವು. ಗುರು ಚರಣಾನುಗ್ರಹದಿಂದ ಆ ಪ್ರಾಂತ ಎಲ್ಲರೂ ಕ್ಷೇಮದಲ್ಲಿರುವರು. ಪರಮಗುರುಗಳವರು ಇಲ್ಲಿ ನಡೆದಿರುವ ಶುಭ ಪರಂಪರೆಯನ್ನು ಕೇಳಿ ಹರ್ಷಿತರಾಗಿ, ಹರಿಹರ ಮಹಾರಾಜರ ಶ್ರೇಯಸ್ಸಿಗಾಗಿ ಮಂತ್ರಾಕ್ಷತೆಯನ್ನು ಕೊಟ್ಟು ಕಳುಹಿಸಿರುವರು.

**ವಿದ್ಯಾ**—ಹೀಗಿರುವುದಲ್ಲವೆ ಸದ್ಗುರು ಕೃಪೆ!

**ತ್ರ್ಯಂಬಕ**—ಆ ಮಹಾಪ್ರಸಾದವನ್ನು ಅನುಗ್ರಹಿಸಿ ಹರಸಲು ಈ ಗುರುಸಾನ್ನಿಧ್ಯವೇ ಈಗ ಇಲ್ಲಿ ದಯೆಗೈದಿರುವುದು ಮಹಾರಾಜರ ಭಾಗ್ಯ ವಿಶೇಷವನ್ನು ಸೂಚಿಸುತ್ತದೆ.

[ಶಾಸ್ತ್ರಿಗಳು ಅಕ್ಷತೆಯ ತಟ್ಟೆಯನ್ನು ವಿದ್ಯಾರಣ್ಯರ ಮುಂದಿಡುವರು. ಹರಿಹರನು ದಂಡಪ್ರಣಾಮಮಾಡಿ ವಿದ್ಯಾರಣ್ಯರ ಮುಂದೆ ನಿಲ್ಲುವನು. ಅವರು ಫಲಪುಷ್ಪ ಮಂತ್ರಾಕ್ಷತೆಗಳನ್ನು ಆತನ ಕೈಯಲ್ಲಿಡುವರು.]

**ತ್ರ್ಯಂಬಕ**—ಪರಮಾಚಾರ್ಯರ ಮಂಗಳಾಶಾಸನವು ಹೀಗಿರುವುದು :—

(ಸೀಸ) ಭವ್ಯಕಾವ್ಯಗಳಿಂದೆ ನವ್ಯಜಗಗಳ ರಚಿಪ
ಕವಿಗಳಾಕೃತಿಯಾಂತು ಧಾತೃದೇವಂ।
ಮಂತ್ರಚತುರತೆಯಿಂದೆ ಲೋಕಸೌಖ್ಯವನೆಸಪ
ಸಚಿವರಾಕೃತಿಯಾಂತು ವಿಷ್ಣುದೇವಂ॥

ಕಲ್ಮಷಂಗಳ ಕಳೆದು ಶಾಂತಿದಯೆಗಳನೆರೆವ
ಯತಿಗಳಾಕೃತಿಯಾಂತು ಶಂಭುದೇವಂ।
ದುಷ್ಟದಾರಣ ಶಿಷ್ಟರಕ್ಷಣೋದ್ಯತರಪ್ಪ
ವೀರರಾಕೃತಿಯಾಂತು ಧರ್ಮದೇವಂ ॥

ಜನದ ವಿದ್ಯೋತ್ಸಾಹ ರೂಪದಲಿ ವಾಣಿಯನಿಶಂ ।
ಧೈರ್ಯ ಕಾರ್ಯೋತ್ಸಾಹ ರೂಪದಲಿ ಲಕ್ಷ್ಮಿಯನಿಶಂ ।
ಪುಣ್ಯ ಕರ್ಮೋತ್ಸಾಹ ರೂಪದಲಿ ಗೌರಿಯನಿಶಂ ।
ನೆಲಸಿ ನಲಿಯುಗೆ ನಿನ್ನ ರಾಜ್ಯದೊಳ್ ಹರಿಹರೇಶಾ ॥

**ವಿದ್ಯಾ**—ಈ ಆಶೀರ್ವಚನವು ಎಷ್ಟು ಭಾವಗರ್ಭಿತವಾಗಿದೆ! ರಾಜೇಂದ್ರ, ಅದರ ಮರ್ಮವನ್ನರಿತೆಯಾ?

**ಹರಿ**—ತಿಳಿದೆನು. ರಾಜ್ಯೋತ್ಕರ್ಷದ ಬಗೆಯನ್ನು ಈ ವಚನಗಳಲ್ಲಿ ಮಹಾಗುರುಗಳವರು ಸೂಚಿಸಿರುವರಲ್ಲವೆ?

**ವಿದ್ಯಾ**—ಆಹಾ, ಈ ಉಪದೇಶವು ಅಮೋಘವಾದುದು! ಯಾವ ದೇಶದಲ್ಲಿ ಕವಿಗಳೂ ವಿದ್ವಾಂಸರೂ ಅಭಿವರ್ಧಿಸಲಾರರೋ, ಯಾವ ದೇಶದಲ್ಲಿ ರಾಜಕೃತ್ಯಗಳನ್ನು ತಿದ್ದಲು ನೀತಿ ರಹಸ್ಯಜ್ಞರಾದ ಮಂತ್ರಿಗಳು ಪ್ರಬಲಿಸಿರುವುದಿಲ್ಲವೋ, ಎಲ್ಲಿ ಸಾಧು ಸಂನ್ಯಾಸಿಗಳು ಪೂಜಿತರಾಗುವುದಿಲ್ಲವೋ, ಎಲ್ಲಿ ಸ್ವಾಮಿಭಕ್ತರಾದ ಶೂರರು ಶೋಭಿಸುವುದಿಲ್ಲವೋ, ಎಲ್ಲಿ ಜನರು ವಿದ್ಯಾತುರರೂ, ಉದ್ಯಮಶೀಲರೂ, ಲೋಕೋಪಕಾರ ನಿರತರೂ ಆಗಿರುವುದಿಲ್ಲವೋ ಆ ದೇಶವು ಉನ್ನತಿಗೆ ಬಾರದು. ರಾಜರಾದವರು ಈ ಸೂಕ್ಷ್ಮವನ್ನು ಮರೆಯದೆ ನಡೆದುಕೊಳ್ಳಬೇಕು.

**ಹರಿ**—ಈ ಆಜ್ಞೆಯನ್ನು ತಲೆಯ ಮೇಲೆ ಹೊತ್ತಿರುವೆನು. ಗುರುದೇವ, ಈಗ ನನ್ನ ಕರ್ತವ್ಯವೇನೆಂಬುದನ್ನು ವಿವರಿಸಬೇಕು.

**ವಿದ್ಯಾ**—ಹರಿಹರೇಶ್ವರಾ, ಮೊದಲು ನಿನ್ನ ತಮ್ಮಂದಿರನ್ನು ಕರೆದು, ಸುಸಜ್ಜಿತಗಳಾದ ಸೈನ್ಯಗಳನ್ನೊದಗಿಸಿಕೊಂಡು, ಪ್ರಜಾಸಂರಕ್ಷಣೆಗೆ ನಿಲ್ಲುವುದಕ್ಕೂ ದಿಗ್ವಿಜಯಕ್ಕೆ ಹೊರಡುವುದಕ್ಕೂ ಸಿದ್ಧರಾಗಿರುವಂತೆ ಆಜ್ಞಾಪಿಸು.

**ಹರಿ**—ಅಪ್ಪಣೆ.

**ವಿದ್ಯಾ**—ಪ್ರಜಾರಂಜನೆಯಾಗುವ ರೀತಿಯಲ್ಲಿ ರಾಜಕಾರ್ಯಗಳನ್ನು ನಡೆಯಿಸುವುದಕ್ಕೆ ಅಷ್ಟಾಮಾತ್ಯ ಮಂಡಲಿಯನ್ನು ನಿಯಮಿಸು. ಅಮಾತ್ಯರಹಿತನಾದ ರಾಜನ ಸ್ಥಿತಿಯು ಕತ್ತಿ ಗುರಾಣಿಗಳನ್ನು ಬಿಸುಟ ಯೋಧನ ಗತಿಯಂತೆ ಭಯಾವಹವಾಗಿರುವುದು. ಆದುದರಿಂದಲೇ, ಧರ್ಮಜ್ಞರೂ ಕುಶಲಮತಿಗಳೂ ಕ್ರೋಧ ಲೋಭ ವಿವರ್ಜಿತರೂ ಆದ ವಿದ್ವಾಂಸರನ್ನು ರಾಜನು ಮಂತ್ರಿಗಳನ್ನಾಗಿ ನಿಯಮಿಸಿಕೊಳ್ಳಬೇಕೆಂದು ಮನು ಪರಾಶರಾದಿ ಮಹರ್ಷಿಗಳು ವಿಧಿಸಿರುವರು. ಈ ಕಾರ್ಯದಲ್ಲಿ ಜಾಗರೂಕನಾಗಿರು.

**ಹರಿ**—ಅಪ್ಪಣೆ.

**ವಿದ್ಯಾ**—ಬಳಿಕ, ನಿನಗೆ ಮಿತ್ರರಾಗಿ ಬರುವ ಸಕಲ ಹಿಂದೂ ರಾಜರೂ ಪಾಳೆಯಗಾರರೂ ನಿನ್ನ ಛತ್ರಚ್ಛಾಯೆಯಲ್ಲಿ ಸುಖಿಸಬಹುದೆಂದೂ, ಹಾಗೆ ಮಾಡದವರು ನಿನ್ನ ಯೋಧರು ಹಾಕುವ ಸಂಕೋಲೆಗಳಲ್ಲಿ ದುಃಖಿಸಬೇಕಾಗುವುದೆಂದೂ ಜೈತ್ರಪತ್ರಿಕೆಯನ್ನು ಬರೆಯಿಸಿ ಕಳುಹಿಸು.

**ಹರಿ**—ಅಪ್ಪಣೆ.

**ವಿದ್ಯಾ**—ವಿದ್ವಾಂಸರನ್ನೂ ಶಾಸ್ತ್ರಜ್ಞರನ್ನೂ, ಗದ್ಯ ಪದ್ಯ ನಿರ್ಮಾಣ ಚತುರರನ್ನೂ, ವ್ಯಾಖ್ಯಾನ ವಿಶಾರದರನ್ನೂ, ಗಾನ ಶಿಲ್ಪಾದಿ ಕುಶಲಕಲಾ ನಿಪುಣರನ್ನೂ ಸಕಲ ದೇಶಗಳಿಂದಲೂ ನಿನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಆದರಿಸಿ, ಅವರಿಂದ ವಿವಿಧ ಪ್ರಬಂಧಗಳನ್ನು ಬರೆಯಿಸಿ, ಅವರ ವಿದ್ಯಾವೈಭವವನ್ನು ಜನರಲ್ಲಿ ಹರಡಿಸು.

**ಹರಿ**—ಅಪ್ಪಣೆ.

**ವಿದ್ಯಾ**—ಹಾಗೆಯೇ ಕಂಚಿ, ಶೃಂಗಗಿರಿ, ಶ್ರೀರಂಗ, ಪಾಜಕ ಕ್ಷೇತ್ರ ಮೊದಲಾದ ಪುಣ್ಯಸ್ಥಲಗಳಲ್ಲಿರುವ ಗುರುಪೀಠಗಳಿಗೆ ನಿನ್ನ ಸೇವೆಯನ್ನು ಸಲ್ಲಿಸಿ, ಅಲ್ಲಲ್ಲಿ ವೇದಶಾಸ್ತ್ರಾಭ್ಯಾಸಗಳು ಸಾಂಗವಾಗಿ ನಡೆಯಲು

ಸಹಾಯನೀಡು. ಅದರಂತೆಯೇ ಜೈನ ವೀರಶೈವ ಗುರುಪೀಠಗಳಿಗೂ ಗೌರವವನ್ನು ತೋರು. ಈ ಧರ್ಮ ಸಂಸ್ಥೆಗಳು ಅಭಿವೃದ್ಧಿಗೊಂಡಂತೆ ನಿನ್ನ ಜನರಲ್ಲಿ ಸೌಜನ್ಯ ಸೌಶೀಲ್ಯಗಳು ವೃದ್ಧಿಗೊಳ್ಳುವುವು. ಅವರ ಸದಾಚಾರ ಸತ್ಸಂಕಲ್ಪಗಳು ಹೆಚ್ಚಿದಂತೆಲ್ಲ ಅವರ ಸೌಖ್ಯ ಸೌಭಾಗ್ಯಗಳು ಹೆಚ್ಚುವುವು.

**ಹರಿ**—ಅಪ್ಪಣೆ.

**ವಿದ್ಯಾ**—ಹರಿಹರೇಶ್ವರಾ, ಮುಖ್ಯವಾಗಿ ರಾಜದಂಡವೂ ರಾಜ ವಿಭವವೂ ಧರ್ಮದೇವತೆಗೆ ಸೇರಿದ ಸಾಧನಗಳೆಂಬುದನ್ನು ಮರೆಯದಿರು. ಸಕಲ ಶ್ರೇಯಸ್ಸೂ ನಿನಗೆ ಸಿದ್ಧವಾಗಿರುವುದು. (ಬ್ರಾಹ್ಮಣರ ಕಡೆ ತಿರುಗಿ) ಚಂದ್ರಶೇಖರ ದೀಕ್ಷಿತರೆ, ಕಂಚಿಯ ಕಡೆ ವಿಶೇಷವೇನು?

**ಚಂದ್ರಶೇಖರ**—ಈ ವರ್ಷಾಕಾಲವು ಮುಗಿದ ಬಳಿಕ ವಿದ್ಯಾ ತೀರ್ಥ ಶ್ರೀಗಳವರು ಹಿಮಾಲಯ ಪ್ರಾಂತ ಹೊರಡಲುದ್ದೇಶಿಸಿರು ವರೆಂದು ಇಲ್ಲಿ ತಿಳಿದಿರಬಹುದು.

**ವಿದ್ಯಾ**—ಬಲ್ಲೆ. ಆ ಕಾರಣದಿಂದಲೇ ಮುಂದಿನ ಕಾರ್ಯ ಗಳನ್ನು ಕುರಿತು ಮಹಾರಾಜನಲ್ಲಿ ಈಗ ಮಾತನಾಡಿದೆನು. ಇನ್ನು ಇಲ್ಲಿಂದ ಕಾಂಚೀಪುರ ಪ್ರಾಂತವೇ ಹೊರಟು, ಅಲ್ಲಿ ಗುರು ಸಂದರ್ಶನ ವಾದ ಬಳಿಕ ಶೃಂಗಗಿರಿಗೆ ಹೋಗಿ ಭಾರತೀತೀರ್ಥ ಗುರುಗಳನ್ನೂ ಕಂಡು, ವೃದ್ಧರಾಗಿರುವ ಅವರಿಗೆ ಮಠಕಾರ್ಯನಿರ್ವಾಹದಲ್ಲಿ ಸಹಾಯ ವಾಗಿರಲು ಶಿಷ್ಯರನ್ನು ನಿಯಮಿಸಿಕೊಟ್ಟು, ಆಮೇಲೆ ಇಲ್ಲಿಗೆ ಹಿಂದಿರುಗ ಬೇಕೆಂದಿರುವೆನು.

**ಹರಿ**—ಗುರು ಕಾರ್ಯವು ಗೌರವವುಳ್ಳದೇ ಸರಿ. ಆದರೆ ತಮ್ಮ ಪಾದ ಪ್ರಭೆಯಿಲ್ಲದೆಡೆಯು ನನ್ನ ಕಣ್ಣಿಗೆ ಕತ್ತಲೆಯ ಗವಿ ಯಂತಿರುವುದು. ಆ ಕಳವಳವನ್ನು ಹೇಗೆ ತಿಳಿಸಲಿ,—ಹೇಗೆತಾನೆ ಸಹಿಸಲಿ?

**ವಿದ್ಯಾ**—ಹರಿಯಪ್ಪಾ, ಧೀರನಾದ ನಿನಗೆ ಕಳವಳವೇಕೆ? ವಿರೂಪಾಕ್ಷ ಕಟಾಕ್ಷವು ನಿನ್ನಲ್ಲಿ ಸಂಪೂರ್ಣವಾಗಿರುವುದು. ನಾನು ಆದಷ್ಟು ಬೇಗ ಹಿಂದಿರುಗಿ ಬರುವೆನು.

**ಹರಿ**—[ನಮಸ್ಕರಿಸುವನು.]

**ವಿದ್ಯಾ**—ವಿಜಯೀಭವ, ಯಶಸ್ವೀಭವ. [ತೆರೆ ಬೀಳುವುದು.

## ದೃಶ್ಯ ೩

[ಓರಗಲ್ಲು ಸಂಸ್ಥಾನದ ಅರಮನೆಯ ಒಳ ಅಂಗಳ. ಅಂತಃಪುರದೊಳಗಿನ ನೃತ್ಯ ಗೀತಗಳ ಶಬ್ದವೂ ಪರಿಮಳವೂ ಅಂಗಳದಲ್ಲಿ ತುಂಬಿರುವುವು. ಇಬ್ಬರು ದೌವಾರಿಕರು ಕಾದಿರುವರು. ಅವರಲ್ಲಿ ಮೊದಲನೆಯವನು ಮುದುಕ. ವಿಜಯನಗರದಿಂದ ಹೋಗಿರುವ ರಾಯಭಾರಿಯು ಅಲ್ಲಿ ಪ್ರವೇಶಿಸುವನು.]

**ರಾಯಭಾರಿ**—(ದೌವಾರಿಕನನ್ನು ಕುರಿತು) ಏನಯ್ಯಾ, ನಿಮ್ಮ ದೊರೆಗಳನ್ನು ನೋಡಲು ಈಗಲಾದರೂ ಸಮಯವೋ? ಒಂದು ವಾರದಿಂದ ಇಲ್ಲಿ ಕಾದಿರುವೆನಲ್ಲಾ!

**೨ನೆಯ ದೌವಾರಿಕ**—ಅದಕ್ಕೆ ನಾವೇನು ಮಾಡಬೇಕು? ನಿಮಗೆ ಕೆಲಸವಿದ್ದರೆ ನೀವು ಕಾದಿರಲೇ ಬೇಕು.

**ರಾಯಭಾರಿ**—ಆದರೆ ನಿಮ್ಮ ದೊರೆಗಳು ಅಂತಃಪುರವನ್ನು ಬಿಡುವುದಕ್ಕೂ ಆಸ್ಥಾನಕ್ಕೆ ಬರುವುದಕ್ಕೂ ಹೊತ್ತುಗೊತ್ತೇನೂ ಇಲ್ಲವೋ?

**೨ನೆಯ ದೌವಾರಿಕ**—ಅದನ್ನು ಕೇಳುವುದಕ್ಕೆ ನೀವಾರು?

**ರಾಯಭಾರಿ**—ನಾನಾರೆಂಬುದನ್ನು ನಿಮಗೆ ಹೇಳುತ್ತಲೇ ಇರುವೆನಲ್ಲ! ನಾನು ವಿಜಯನಗರ ಸಂಸ್ಥಾನದ ರಾಯಭಾರಿ. ಪರರಾಜರೇನಾದರೂ ಪತ್ರವನ್ನು ಕೊಟ್ಟು ಕಳುಹಿದರೆ ಅದನ್ನು ಒಡನೆಯೆ ಅಂಗೀಕರಿಸಿ ಪ್ರತ್ಯುತ್ತರವನ್ನು ಕೊಡಬೇಕಾದುದು ಪ್ರತಿಯೊಬ್ಬ ರಾಜನಿಗೂ ನಿರ್ಬಂಧವಾಗಿರುವ ಕರ್ತವ್ಯ. ನಿಮ್ಮ ರಾಜರಿಗೆ ಈ ಮರ್ಯಾದೆ ತಿಳಿಯದೆ?

**೨ನೆಯ ದೌವಾರಿಕ**—ನಮ್ಮ ಮಹಾರಾಜರಿಗೆ ಎಲ್ಲವೂ ತಿಳಿದಿದೆ.

**ರಾಯಭಾರಿ**—ತಿಳಿದಿದ್ದರೆ ಹೀಗೆ ಯಾವಾಗಲೂ ಭೋಗಪರವಶ ರಾಗಿರುವುದುಂಟೆ ?

**೨ನೆಯ ದೌವಾರಿಕ**—ನಿಮ್ಮ ರಾಜರಿಗೇನು ಭೋಗದ ಸ್ಪರ್ಶವೇ ಇಲ್ಲವೋ ?

**ರಾಯಭಾರಿ**—ಆಹಾ! ಆ ವೀರಚರ್ಯೆಯಲ್ಲಿ, ಈ ವಿಷಯ ಲಂಪಟತೆಯಲ್ಲಿ ? ಆ ಧರ್ಮವ್ರತವೆಲ್ಲಿ, ಈ ಕರ್ತವ್ಯ ವಿಸ್ಮೃತಿಯೆಲ್ಲಿ ? ..........ಆ ವಿಚಾರವಿರಲಿ. ಸದ್ಯಃ ನಾನು ಬಂದಿರುವ ಸಂಗತಿ ಯನ್ನು ನೀನೀಗ ನಿಮ್ಮ ರಾಜರಿಗೆ ತಿಳಿಸುವೆಯಾ, ಅಥವಾ ನಾನು ಹಿಂದಿರುಗಿ ಹೋಗಿ ನಮ್ಮ ಪ್ರಭು ಸನ್ನಿಧಿಯಲ್ಲಿ ಇಲ್ಲಿಯ ವಿಚಕ್ಷಣೆ ಯನ್ನು ವಿವರಿಸಲೆ ?

[ದೌವಾರಿಕರು ಒಬ್ಬರೊಬ್ಬರ ಮುಖವನ್ನು ನೋಡಿಕೊಳ್ಳುವರು.

**೧ನೆಯ ದೌವಾರಿಕ**—(೨ನೆಯವನನ್ನು ಒಂದು ಕಡೆಗೆ ಕರೆದು) ಇವ ನೇನು ನಮ್ಮನ್ನು ಬಿಡುವಹಾಗಿಲ್ಲ; ಬಲಿಷ್ಠನಂತೆ ಕಾಣುತ್ತಾನೆ. ಇವನನ್ನು ಅಸಮಾಧಾನಪಡಿಸಿದರೆ ಏನಾದರೂ ಹಾನಿಯಾದೀತೋ ಏನೋ ? ನಮಗೇಕೆ ಆ ಗೊಡವೆ ? ಒಳಗೆ ಹೋಗಿ ಈ ಸಂಗತಿಯನ್ನು ಸಿಂಗನ್ನನ ಕಿವಿಯಲ್ಲುಸಿರಿ ಏನು ಹೇಳುವನೋ ಕೇಳಿ ಬಾ.

[೨ನೆಯವನು ಹೋಗುವನು.

(ರಾಯಭಾರಿಯನ್ನು ಕುರಿತು) ರಾಯಭಾರಿಗಳೆ, ಇದೇಕೆ ಹೀಗೆ ಸಿಟ್ಟು ಗೊಳ್ಳುವಿರಿ ? ನಾವು ಪ್ರಭುವಿನ ಚಿತ್ತವನ್ನನುಸರಿಸಬೇಕಾದ ಸೇವಕ ರೆಂದು ನಿಮಗೆ ತಿಳಿದೇ ಇದೆ. ನೀವು ಬಂದಿರುವ ಸುದ್ದಿಯನ್ನು ಒಳಗೆ ಅರಿಕೆ ಮಾಡ ಹೋದರೆ ನಮಗೆ ಒಂದು ಕಷ್ಟ; ಹೋಗದಿದ್ದರೆ ಇನ್ನೊಂದು ಕಷ್ಟ. ಸ್ವಾಮಿಾ, ಈ ಪಾಡು ಯಾರಿಗೂ ಬೇಡ! ತಾವು ದಯೆಮಾಡಿ ಸ್ವಲ್ಪ ನಿಲ್ಲಿರಿ. ಒಳಗೆ ಹೋಗಿರುವವನು ತಮಗೆ ಉತ್ತರ ವನ್ನು ತರಬಹುದು.

**ರಾಯಭಾರಿ**—ಹಾಗೆಯೇ ಆಗಲಿ........ಅಯ್ಯಾ, ನಿಮ್ಮ ಸಂಸ್ಥಾನದ ಮಂತ್ರಿ ಯಾರು?

**೧ನೆಯ ದೌವಾರಿಕ**—ಸಿಂಗಣ್ಣನವರು.

**ರಾಯಭಾರಿ**—ಅವರೆಂಥವರು—ಮುದುಕರೋ, ಪ್ರಾಯದವರೋ?

**೧ನೆಯ ದೌ**—ವೃದ್ಧರೊಬ್ಬರು ಎರಡು ವರ್ಷಗಳ ಹಿಂದೆ ಮಂತ್ರಿಯಾಗಿದ್ದರು. ಅವರು ಬಹು ಸಮರ್ಥರು. ಈ ಊರು ಮುಂದಿನ ದೊಡ್ಡ ಕೆರೆಯನ್ನೂ ಕಾಲುವೆಗಳನ್ನೂ ಕಟ್ಟಿಸಿದವರು ಅವರೇ. ಅವರು ಹೋದಮೇಲೆ ಮಹಾರಾಜರು ತಮ್ಮ ಆಪ್ತಸ್ನೇಹಿತರಾದ ಈ ಸಿಂಗಣ್ಣನವರನ್ನೇ ಮಂತ್ರಿ ಪದವಿಗೆ ನಿಯಮಿಸಿಕೊಂಡರು.

**ರಾಯಭಾರಿ**—ಹಾಗೋ? ಈ ಸಿಂಗಣ್ಣನವರೇನು—ವಿದ್ವಾಂಸರೋ, ವೀರರೋ?

**೧ನೆಯ ದೌ**—ಇವರು ಒಳ್ಳೆಯ ರಸಿಕರು. ಮಹಾರಾಜರಿಗೆ ಇವರ ಕಾಲದಲ್ಲಿ ನಿಶ್ಚಿಂತೆ. ಅದೋ, ಸಿಂಗಣ್ಣನವರೇ ಬರುತ್ತಿರುವರು.

[ಪ್ರವೇಶ: ಸಿಂಗಣ್ಣನೂ ೨ನೆಯ ದೌವಾರಿಕನೂ ಬರುವರು.

ರಾಯಭಾರಿಯು ನಮಸ್ಕರಿಸುವನು.]

**ಸಿಂಗಣ್ಣ**—(ಪ್ರತಿನಮಸ್ಕಾರಮಾಡಿ) ರಾಯಭಾರಿಗಳೆ, ತಾವು ಬಂದುದಾವಾಗ? ತಾವು ಬಂದಿರುವಿರೆಂದು ಕೇಳಿ ನಮ್ಮ ಮಹಾರಾಜರು ಬಹು ಸಂತೋಷಪಟ್ಟರು. ತಮ್ಮ ಸಂಸ್ಥಾನದಲ್ಲಿ ಎಲ್ಲವೂ ಕುಶಲವಷ್ಟೆ?

**ರಾಯಭಾರಿ**—ಎಲ್ಲವೂ ಕುಶಲ. ನಾನು ಬಂದು ಎಂಟು ದಿನಗಳಾಗುತ್ತ ಬಂದವು. ನಾನು ತಂದಿರುವ ಪತ್ರಕ್ಕೆ ಕ್ಷಿಪ್ರವಾಗಿ ಉತ್ತರ ತರಬೇಕೆಂದು ನಮ್ಮ ಮಹಾರಾಜರವರು ಆಜ್ಞಾಪಿಸಿರುವರು.

**ಸಿಂಗಣ್ಣ**—ನಮ್ಮ ಮಹಾರಾಜರಿಗೆ ದೇಹದಲ್ಲಿ ಆಲಸ್ಯವಾಗಿದ್ದುದರಿಂದ ತಮ್ಮನ್ನು ನೋಡುವುದು ನನಗೆ ಸಾಧ್ಯವಿಲ್ಲದೆ ಹೋಯಿತು. ತಾವು ತಂದಿರುವ ಪತ್ರವನ್ನು ಈಗ ನನ್ನ ಕೈಗೆ ಕೊಟ್ಟರೆ ಅದರ ವಿವರ

ವನ್ನು ನಾನು ಮಹಾರಾಜರಲ್ಲಿ ಬಿನ್ನಯಿಸಿ ಪ್ರತ್ಯುತ್ತರವನ್ನು ಸಿದ್ಧಪಡಿಸುವೆನು. ಅನಂತರ ತಾವು ಮಹಾರಾಜರ ದರ್ಶನವನ್ನು ಪಡೆದು ಸಂಭಾಷಣೆ ಬೆಳಿಸಬಹುದು. ಹಾಗೆ ಆಗಬಹುದಷ್ಟೆ?

**ರಾಯಭಾರಿ**—ಆಗಬಹುದು. (ಪತ್ರವನ್ನು ಕೊಡುವನು.)

**ಸಿಂಗಣ್ಣ**—ತಾವು ಇಂದಿನಿಂದ ನಮ್ಮ ಆತಿಥ್ಯವನ್ನು ಸ್ವೀಕರಿಸಿ ನಮ್ಮ ಮಿತ್ರರಾಗಿರಬೇಕು. ತಮ್ಮ ಪರಿವಾರದ ಸುಖವಸತಿಗೆ ತಕ್ಕ ಸೌಕರ್ಯಗಳು ಸಿದ್ಧವಾಗಿವೆ. ತಾವು ಈ ಕೋರಿಕೆಯನ್ನು ನಿರಾಕರಿಸದೆ ನಡೆಯಿಸಿಕೊಡಬೇಕು.

[ತೆರೆ ಬೀಳುವುದು.

---

## ದೃಶ್ಯ ೪

[ಓರಗಲ್ಲು ರಾಜನ ಅರಮನೆಯ ಒಳಭಾಗ. ಕೆಲಮಂದಿ ನರ್ತಕಿಯರು "ಸಾ ವಿರಹೇ" ಎಂಬ ಅಷ್ಟಪದಿಯನ್ನು ಹಾಡುತ್ತಲೂ ಅಭಿನಯಿಸುತ್ತಲೂ ಇರುವರು. ರಾಜನೂ, ನಾಲ್ವರೈವರು ನರ್ಮಸಚಿವರೂ, ಕೆಲಮಂದಿ ವಾರಾಂಗನೆಯರೂ ಸೇರಿ ಕುಳಿತು ಪಗಡೆಯಾಡುತ್ತಿರುವರು. ಸಿಂಗಣ್ಣನು ಒಂದು ಪತ್ರವನ್ನು ಹಿಡಿದುಕೊಂಡು ಪ್ರವೇಶಿಸುವನು.]

**೧ನೆಯ ನರ್ಮಸಚಿವ**—ಏನಯ್ಯಾ ಸಿಂಗಣ್ಣ, ಬಹು ಕಾರ್ಯಭಾರವೋ? ಈ ಹೊತ್ತೇನು, ನಿನ್ನ ದಯೆ ಈ ಕಡೆ ಇನ್ನೂ ಬಂದಿಲ್ಲ?

**೨ನೆಯ ನರ್ಮಸಚಿವ**—ಅವರಿಗೇನು? ಮಂತ್ರಿಗಳು. ಎಲ್ಲವೂ ಅವರದೇ ಇದೆ!

**೩ನೆಯ ನರ್ಮಸಚಿವ**—ಆದರೇನು? ಈ ಹೊತ್ತಿನ ರಸಪಾಕವು ಎಂದು ಬೇಕೆಂದರೆ ಅಂದು ಸಿಕ್ಕುವುದೆ? ಬಾ, ಸಿಂಗಣ್ಣ; ಬಂದು ಸ್ವಲ್ಪ ನೋಡು.

**ಸಿಂಗಣ್ಣ**—ಈ ಹೊತ್ತು ಅವಸರವಾಗಿ ನಡೆಯಬೇಕಾದ ರಾಜಕಾರ್ಯವೊಂದಿದೆ.

**೪ನೆಯ ನರ್ಮಸಚಿವ**—ಸರಿಸರಿ, ಆಟ ಸ್ವಾರಸ್ಯವಾಗಿರುವಾಗ ಅವಸರದ ಕಾರ್ಯವಂತೆ! ಬೆಣ್ಣೆ ಬರುವ ವೇಳೆಗೆ ಕಣ್ಣುಮುಚ್ಚಿಕೋ ಎಂದ ಹಾಗೆ.

**೩ನೆಯ ನರ್ಮ**—ಅಲ್ಲ ಅಲ್ಲ; ಪವ್ವಳಿಸುವ ಸಮಯದಲ್ಲಿ ಪಾಠ ಓದು ಎಂದ ಹಾಗೆ. [ಎಲ್ಲರೂ ನಗುವರು.

**೨ನೆಯ ನರ್ಮ**—ಅಥವಾ, ತಾಂಬೂಲ ಹಾಕಿಕೊಳ್ಳುವಾಗ ತರ್ಕ ಪ್ರಸಂಗವೆತ್ತಿದ ಹಾಗೆ. [ಎಲ್ಲರೂ ನಗುವರು.

**೧ನೆಯ ನರ್ಮ**—ಅದೇನಯ್ಯಾ ನಿನ್ನ ರಗಳೆ? ಹೇಳಾದರೂ ಹೇಳು.

**ಸಿಂಗಣ್ಣ**—ವಿಜಯನಗರ ಸಂಸ್ಥಾನದ ರಾಜನು ನಮ್ಮ ಮಹಾ ರಾಜರಿಗೆ ಒಂದು ಪತ್ರವನ್ನು ಕಳುಹಿಸಿದ್ದಾನೆ. ಅದನ್ನು ತಂದ ರಾಯಭಾರಿಯು ಏಳೆಂಟು ದಿನಗಳಿಂದ ಉತ್ತರಕ್ಕಾಗಿ ಕಾದಿದ್ದಾನೆ.

[ರಾಜನ ಮುಖವು ಕಳೆಗುಂದುವುದು.

**೧ನೆಯ ನರ್ಮ**—ವಿಜಯನಗರವೆಂಬುದು ಎಲ್ಲಿದೆ?

**೨ನೆಯ ನರ್ಮ**—ಅದು ಯಾವುದೋ ಒಂದು ಸಣ್ಣ ಪಾಳೆಯ; ಯಾರೋ ಅನಾಮಧೇಯರು ನಿನ್ನೆಯೋ ಮೊನ್ನೆಯೋ ಕಟ್ಟಿಕೊಂಡುದು.

**೩ನೆಯ ನರ್ಮ**—ಅವರು ಮದುವೆಯ ಲಗ್ನಪತ್ರಿಕೆ ಕಳುಹಿಸಿ ರುವರೇನೋ?

**೪ನೆಯ ನರ್ಮ**—ಇದ್ದೀತು. ನಮ್ಮ ಯೋಗ ಚೆನ್ನಾಗಿದೆ. ಹೊಸ ಸಂಸ್ಥಾನದಲ್ಲಿ ಊಟ ಉಪಚಾರಗಳೆಂದರೆ ಯಾರಿಗೆ ಬೇಡ?

**ರಾಜ**—(ಸಿಂಗಣ್ಣನ ಕಡೆ ತಿರುಗಿ) ಪತ್ರವನ್ನೋದು, ನೋಡೋಣ.

**ಸಿಂಗಣ್ಣ**—(ನೃತ್ಯ ಗೀತಗಳನ್ನು ನಿಲ್ಲಿಸಿ ನರ್ತಕಿ ಗಾಯಕಿಯರೆಲ್ಲರೂ ಹೋಗುವಂತೆ ಸಂಜ್ಞೆಮಾಡುವನು; ಅವರು ಹೋದ ಬಳಿಕ ಪತ್ರವನ್ನು ತೆಗೆದುಕೊಂಡು ಓದುವನು.)

॥ ಜಯ ಶ್ರೀ ವಿರೂಪಾಕ್ಷ ॥

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥

ಸ್ವಸ್ತಿ ಶ್ರೀಮತ್ಸಮಸ್ತ ಮಹೀಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ಣಾಟಕ ಜನಪದ ಸಂಪದಧಿಷ್ಠಾನಭೂತ ವಿಜಯನಗರ ಮಹಾರಾಜಧಾನೀ ದಿವ್ಯರತ್ನ ಸಿಂಹಾಸನಾಸೀನ ಶ್ರೀಮದಾದಿವರಾಹನಿಕೇತನ ಹಿಂದೂರಾಯಸುರತ್ರಾಣ ಅರಿರಾಯ ವಿಭಾಳ ಭಾಷೆಗೆ ತಪ್ಪುವ ರಾಯರ ಗಂಡ ಶ್ರೀ ವೀರ ಹರಿಹರ ಮಹಾರಾಜರು ಓರಗಲ್ಲು ಸಂಸ್ಥಾನಾಧಿಪತಿಗಳಾದ ಪ್ರತಾಪಕೃಷ್ಣ ಮಹಾರಾಜರವರ ಸನ್ನಿಧಿಗೆ ಬರೆಯಿಸಿ ಕಳುಹಿದ ನಿರೂಪದ ಬಗೆಯೆಂತೆಂದರೆ:—ಶ್ರೀ ಭುವನೇಶ್ವರೀ ಶ್ರೀ ವಿರೂಪಾಕ್ಷೇಶ್ವರರ ಪ್ರಸಾದದಿಂ ನಾವು ತುಂಗಭದ್ರಾತೀರದಲ್ಲಿ ವಿಜಯನಗರ ಮಹಾರಾಜಧಾನಿಯಂ ಸಂಸ್ಥಾಪಿಸಿ ಕರ್ಣಾಟಕ ಸಿಂಹಾಸನವಂ ಪ್ರತಿಷ್ಠಿಸಿರುವುದು ಸರಿಯಷ್ಟೆ. ವೇದ ಧರ್ಮೋತ್ಕರ್ಷಕ್ಕಾಗಿಯೂ ಹಿಂದೂಜನಾಭ್ಯುದಯಕ್ಕಾಗಿಯೂ ನಾವು ನಮ್ಮ ಸಾಮ್ರಾಜ್ಯವನ್ನೆಂಟು ದಿಕ್ಕುಗಳಲ್ಲಿಯೂ ವಿಸ್ತಾರಪಡಿಸಿ ನೆಲೆಗೊಳಿಸಬೇಕೆಂದು ನಿಶ್ಚಯಿಸಿರುವೆವಾದಕಾರಣ, ಸಮಸ್ತ ಹಿಂದೂ ಮಹಾರಾಜರೂ ನಮ್ಮ ಸಂಕಲ್ಪವನ್ನನುಮೋದಿಸಿ, ನಮಗೆ ಮಿತ್ರರೂ ಸಾಮಂತರೂ ಆಗಿ, ನಮ್ಮಾಧಿಪತ್ಯದ ಒಳಕಟ್ಟಿಗೆ ಸೇರಿ, ಪರದೇಶೀಯರನ್ನು ದೇಶಾಂತರಕ್ಕೆ ಹೊಡೆದಟ್ಟುವ ಸಮಾರಂಭದಲ್ಲಿ ನಮಗೆ ಸಹಾಯವಾಗಬೇಕೆಂಬ ಕೋರಿಕೆಯನ್ನು ಈ ಪತ್ರದಿಂದ ನಿಮಗೆ ತಿಳುಹಿಸತಕ್ಕವರಾಗಿದ್ದೇವೆ. ಈ ನಮ್ಮ ಸೂಚನೆಯು ನಿಮಗೆ ಸಮ್ಮತವಾಗದಿರುವ ಪಕ್ಷದಲ್ಲಿ ನಮ್ಮ ಸೇನಾಸಮೂಹವನ್ನು ಕ್ಷಿಪ್ರದಲ್ಲಿಯೇ ನೀವು ರಣರಂಗದಲ್ಲೆದುರಿಸಬೇಕಾದೀತೆಂದರಿಯುವುದು. ವಿಶ್ವಾಸವಿರಲಿ.

**ಶ್ರೀ ವಿರೂಪಾಕ್ಷ.**

[ರಾಜನು ಸ್ತಬ್ಧನಾಗಿರುವನು.]

**ಸಿಂಗನ್ನ**—ಈಗ ನಾವು ಮಾಡತಕ್ಕುದೇನು?

**೧ನೆಯ ಸರ್ದಾರ**—ಇದೇನು ಮಹಾವಿಷಯ? ನಾವೇ ಪ್ರತ್ಯುತ್ತರವನ್ನು ಬರೆದು ಕಳುಹಿಸುವೆವೆಂದು ಹೇಳಿ ರಾಯಭಾರಿಯನ್ನು ಹೋಗೆಂದರಾಯಿತು.

**ಸಿಂಗಣ್ಣ**—ಉತ್ತರ ಕಳುಹಿಸುವುದಿನ್ನಾವಾಗ?

**೨ನೆಯ ಸರ್ದಾರ**—ಉತ್ತರವೇನು ಈ ನಿರೂಪಕ್ಕೆ? ಇಂಥಾ ಪೊಳ್ಳು ಆರ್ಭಟಕ್ಕೆಲ್ಲ ನಾವು ಹೆದರಬೇಕೋ?

**ಸಿಂಗಣ್ಣ**—ಹಾಗಲ್ಲ; ಅದು ಹೊಸ ರಾಜ್ಯ. ಅಂಥವರಿಗೆ ಸಾಹಸ ಪ್ರತಾಪಗಳು ಸ್ವಲ್ಪ ಹೆಚ್ಚಾಗಿರುವುದುಂಟು. ಆ ಹೆಮ್ಮೆಯಿಂದ ಅವರು ಯುದ್ಧ ಸನ್ನದ್ಧರಾಗಿ ಬಂದರೆ—?

**೨ನೆಯ ಸರ್ದಾರ**—ಬಂದರೆ ಬರಲಿ.

**ಸಿಂಗಣ್ಣ**—ಆ ಉತ್ತರವನ್ನೀಗಲೆ ಕೊಡಬಹುದಲ್ಲ!

**ರಾಜ**—(ಆತುರದಿಂದ) ಬೇಡ, ಹಾಗೆ ಬೇಡ.

**೩ನೆಯ ಸರ್ದಾರ**—ದುಡುಕಬೇಡ. ನಮ್ಮ ಸೈನ್ಯವು ಯುದ್ಧ ಪ್ರಸಕ್ತಿಯನ್ನು ಮರೆತು ಎಷ್ಟೋ ಕಾಲವಾಯಿತು. ಈಗ ನೆನೆಸಿಕೊಂಡ ಕ್ಷಣದಲ್ಲಿಯೇ ಯುದ್ಧ ಸನ್ನಾಹಮಾಡುವುದು ಸಾಧ್ಯವೆ?

**೨ನೆಯ ಸರ್ದಾರ**—ನಮ್ಮ ಸೈನ್ಯವು ಸಿದ್ಧವಾಗಿಲ್ಲದಿದ್ದರೇನು? ನಮಗಾರೂ ಮಿತ್ರರಾಜರಿಲ್ಲವೆ? ಅವರ ಸೇನೆಗಳನ್ನು ಸಹಾಯಕ್ಕೆ ಕರೆಯಿಸಿದರಾಯಿತು.

**ಸಿಂಗಣ್ಣ**—ಎಲ್ಲ ಹಿಂದೂ ರಾಜ್ಯಗಳೂ ನಮ್ಮಂತೆಯೇ ಇವೆ.

**೪ನೆಯ ಸರ್ದಾರ**—ನನಗೊಂದು ಆಲೋಚನೆ ತೋರುತ್ತದೆ. ನಾವು ದೆಹಲಿಗೊಬ್ಬ ರಾಯಭಾರಿಯನ್ನು ಕಳುಹಿಸಿ ಸುಲ್ತಾನನ ಸಹಾಯವನ್ನೇಕೆ ಬೇಡಬಾರದು?

**೧ನೆಯ ಸರ್ದಾರ**—ಅದು ಒಳ್ಳೆಯ ಯೋಚನೆ. ಸುಲ್ತಾನನ ದಂಡು ನಮ್ಮ ಕಡೆ ನಿಂತಮೇಲೆ ನಮಗಿದಿರಾರು?

**೨ನೆಯ ಸರ್ದಾರ**—ವಿಜಯನಗರ ಗಿಜಯನಗರಗಳೆಲ್ಲಾ ಆಗ ಪಲಾಯನಸೂಕ್ತ ಪಾರಾಯಣಮಾಡಬೇಕಾದುವೇ!

**೩ನೆಯ ಸರ್ದಾರ**—ಇರಲಿ; ಒಂದು ವೇಳೆ ಹಾಗಾದರೂ, ವಿಜಯನಗರದವರನ್ನು ಸೋಲಿಸಿದ ಸುಲ್ತಾನನ ಸೈನ್ಯವು ಆಮೇಲೆ ನಮ್ಮ ಮೇಲೆಯೇ ತಿರುಗಿಬಿದ್ದರೆ?............ಅವರೇನು ಹಾಗೆ ಮಾಡದವರಲ್ಲ.

**೪ನೆಯ ಸರ್ದಾರ**—ಅದೂ ನಿಜವೇ.

[ರಾಜನು ಮತ್ತಷ್ಟು ಚಿಂತಾಕುಲನಾಗುವನು.

**ಸಿಂಗನ್ನ**—ನಮ್ಮ ಈಗಿನ ಸನ್ನಿವೇಶವನ್ನೆಲ್ಲ ಚೆನ್ನಾಗಿ ನೋಡಿ ಆಲೋಚನೆ ಮಾಡಿದರೆ ವಿಜಯನಗರದೊಡನೆ ಸ್ನೇಹವನ್ನು ಬೆಳೆಯಿಸುವುದೇ ನಮಗೆ ಕ್ಷೇಮವೆಂದು ತೋರುತ್ತದೆ.

**ರಾಜ**—ನನಗೂ ಹಾಗೆಯೇ ತೋರುತ್ತದೆ.

**೩ನೆಯ ಸರ್ದಾರ**—ಅದೇ ಸರಿಯಾದ ಉಪಾಯ. ಇಷ್ಟಕ್ಕೂ, ನಮ್ಮ ಹಿಂದೂ ಜನರ ಉಚ್ಛ್ರಾಯವನ್ನು ಸಾಧಿಸುವೆವೆಂದು ಹೊರಟಿರುವವರೊಡನೆ ನಮಗೆ ವಿರೋಧವಿರಬಹುದೆ?

**೪ನೆಯ ಸರ್ದಾರ**—ಅದೇ ನ್ಯಾಯವಾದ ಮಾತು.

**ಸಿಂಗನ್ನ**—ಇದೇ ನಿಶ್ಚಯವಷ್ಟೆ?

**ರಾಜ**—ಆಹಾ, ಇದೇ ನಮ್ಮ ನಿಶ್ಚಯ. ನೀನು ಆ ರಾಯಭಾರಿಯನ್ನು ಕರೆಯಿಸಿ ತಕ್ಕಂತೆ ಬಹುಮಾನಮಾಡಿ ವಿಶ್ವಾಸ ಸಂಪಾದಿಸುವ ರೀತಿಯಲ್ಲಿ ಉತ್ತರವನ್ನು ಬರೆದು ಕಳುಹಿಸು.

**ಸಿಂಗನ್ನ**—ಅಪ್ಪಣೆ. [ತೆರೆ ಬೀಳುವುದು.

---

## ದೃಶ್ಯ ೫

[ವಿಜಯನಗರದಲ್ಲಿ ಹರಿಹರರಾಯನ ಅರಮನೆಯಲ್ಲಿ ಒಂದು ಏಕಾಂತಗೃಹ. ವಿದ್ಯಾರಣ್ಯರೂ ಹರಿಹರರಾಜನೂ ಕುಳಿತು ಮಾತನಾಡುತ್ತಿರುವರು.]

**ಹರಿಹರ**—ಇನ್ನೂ ಎಂತೆಂತಹ ದುಃಖಗಳನ್ನು ಅನುಭವಿಸ ಬೇಕೆಂದು ನನ್ನ ಹಣೆಯಲ್ಲಿ ಬರೆದಿರುವುದೋ! ತಿಳಿಯುವುದು ಹೇಗೆ? ಯವ್ವನದಲ್ಲಿ ನಿಲ್ಲಲು ನೆಲವಿಲ್ಲದೆ, ಹೇಳಲು ಹೆಸರಿಲ್ಲದೆ, ದೇಶದೇಶವೂ, ಅಲೆದು, ಪರಿಪರಿಯಾಗಿ ಪಾಡುಪಟ್ಟುದಾಯಿತು. ಈಗ, ಮುಪ್ಪಿನಲ್ಲಿ, ತಮ್ಮ ಪಾದಧೂಳಿಯ ಪ್ರಭಾವದಿಂದ ಮನೆ ನಿಲ್ಲುವಹಾಗಾಯಿತೆಂದು ಸಂತೋಷಪಡುತ್ತಿದ್ದಾಗ, ಮನೆಯ 'ದೀಪವೇ ನೊಂದಿಹೋಯಿತು. (ಅಳು ದನಿಯಿಂದ) ಅಯ್ಯೋ! ನನಗಿಂತ ಭಾಗ್ಯಹೀನನಾದವನು ಯಾರಾದರೂ ಇರುವುದುಂಟೆ?

**ವಿದ್ಯಾರಣ್ಯ**—ಹರಿಯಪ್ಪಾ, ದುಃಖವನ್ನು ತಡೆದುಕೋ. ಪ್ರಪಂಚದ ಸ್ವಭಾವವೇ ಹೀಗೆ. ಯಾವ ಬೆಳಕನ್ನೋ ನಮ್ಮದೆಂದು ಕೊಂಡು ನಾವು ಸಂಭ್ರಮಪಡುತ್ತಿರುವಾಗ ಎಲ್ಲಿಂದಲೋ ಬಿರುಗಾಳಿ ಬೀಸಿ ಅದು ಆರಿಹೋಗುವುದು. ಇದನ್ನು ಯಾರೂ ತಪ್ಪಿಸಲಾರರು.

**ಹರಿ**—ಗುರುದೇವ, ನನ್ನಿಂದ ಈ ರಾಜ್ಯವನ್ನು ಅವನು ಪಡೆದು ಏನೋ ಸುಖಪಡುವನೆಂದು ನಂಬಿಕೊಂಡಿದ್ದೆ. ಈಗ ನನಗೆ ರಾಜ್ಯ ಸಂಪಾದನೆ ಮಾಡಿಕೊಡುವುದಕ್ಕೋಸ್ಕರವೇ ಅವನು ಬದುಕಿದ್ದ ಹಾಗಾಯಿತು......(ಅಳುತ್ತಾ) ಅಯ್ಯೋ! ಸೋಮಣ್ಣಾ, ನಾನೇನು ಅಂಥಾ ರಾಜ್ಯಲೋಭಿಯೆ? ನಿನ್ನನ್ನು ಯುವರಾಜನನ್ನಾಗಿಮಾಡಿ ನಾನು ಗುರುಸನ್ನಿಧಿಯಲ್ಲಿ ವಿಶ್ರಾಂತಿ ಹೊಂದಬೇಕೆಂದಿದ್ದೆನಲ್ಲಾ! ಅಯ್ಯೋ ವಿಧಿಯೆ! ಏಕೆ ಹೀಗೆ ಮಾಡಿದೆ?

**ವಿದ್ಯಾ**—ಹರಿಯಪ್ಪಾ, ಸೋಮಣ್ಣನಿಗಾಗಿ ನೀನು ಶೋಕಿಸ ಬೇಡ. ಅವನು ಉತ್ತಮ ಲೋಕಗಳನ್ನೇ ಸೇರಿರುವನು. ಒಳ್ಳೆಯವರಿಗೆ ಸಾವು ಸ್ವರ್ಗದ್ವಾರ.

(ಕಂದ) ಮನವೆಂಬಾಜ್ಯವ ತಳೆದಿಹ।
ತನುವೆಂಬಿಂಧನದೆ ಧರ್ಮಹೋಮುವನೆಸಪಾ ॥
ಮನುಜಜನ ಜೀವನಸತ್ರಂ।
ಕೊನೆಯೊಂದುಗುವಲ್ತೆ ಮರಣವೆಂಬವಭೃಥದಿಂ ॥

ಹೀಗೆ ವೇದಗಳು ಸಾರುತ್ತವೆ. ಸೋಮಣ್ಣನು ಬದುಕಿದ್ದುದು ಹಾಗೆ. ಅವನಿಗಾಗಿ ನಾವು ದುಃಖಿಸತಕ್ಕುದಲ್ಲ.

**ಹರಿ**—ಗುರುದೇವ, ರಾಮರಾಜ್ಯದಲ್ಲಿ ತಂದೆ ಬದುಕಿರುವಾಗ ಮಗನು ಸತ್ತುದೇ ಇಲ್ಲವೆಂದು ಹೇಳುವರು. ನನ್ನ ರಾಜ್ಯದಲ್ಲಿ ರಾಜನಾದ ನನ್ನ ಮಗನೇ ನನ್ನ ಕಣ್ಣೆದಿರಿಗೆ ಮರಣಹೊಂದಿರುವನು. ಇದಕ್ಕೆ ನಾನು ಮಾಡಿದ ಮಹಾಪಾಪವೇ ಕಾರಣವಾಗಿರಬೇಕಲ್ಲವೆ? ಯಾರಿಗೆ ಯಾವ ಅನ್ಯಾಯವನ್ನು ಮಾಡಿದೆನೋ! ಯಾರು ಮಾಡಿದ ಅನ್ಯಾಯವನ್ನು ತಿದ್ದದೆ ಬಿಟ್ಟೆನೋ! ಯಾರನ್ನು ವಿಚಾರಿಸದೆ ಉಪೇಕ್ಷಿಸಿದೆನೋ! ಯಾರ ಗೋಳು ತಗುಲಿ ಹೀಗಾಯಿತೋ! ಅಯ್ಯೋ! ಈ ಸಂಕಟವನ್ನು ಹೇಗೆ ತಡೆಯಲಿ!

**ವಿದ್ಯಾ**—ಹರಿಯಪ್ಪಾ, ನಿನ್ನ ಪಾಪದಿಂದ ನಿನ್ನ ಮಗನ ಆಯುಸ್ಸು ತಗ್ಗಿತೋ, ಅವನ ಕರ್ಮವು ಸವೆದೇ ಅವನ ಆ ಅವತಾರವು ಮುಗಿಯಿತೋ ಯಾರು ಹೇಳಬಲ್ಲರು? ಅನೇಕ ಜನ್ಮಾಂತರಗಳಿಂದ ಬಂದ ಋಣಾನುಬಂಧದ ರೀತಿಯನ್ನು ತಿಳಿಯಲಾಗದು. ಅದನ್ನು ತಿಳಿದರೆ ಆಗುವ ಪ್ರಯೋಜನವು ತಾನೆ ಏನು? ಆದುದು ಆಗಿಹೋಯಿತು; ಮುಂದೆ ಆಗತಕ್ಕುದು ಚೆನ್ನಾಗಿ ಆಗಲಿ.

**ಹರಿ**—ಇನ್ನು ನನಗೆ ಆಗಬೇಕಾದುದೇನು? ಇದ್ದ ಒಬ್ಬ ಮಗನೂ ಈ ಲೋಕವನ್ನು ಬಿಟ್ಟಮೇಲೆ ಏನಾದರೆ ಏನು? ಏನಾಗದಿದ್ದರೆ ಏನು?

**ವಿದ್ಯಾ**—ಹಾಗೆನ್ನಲಾಗದು. ನಿನ್ನ ಮಗನು ಈ ಲೋಕವನ್ನು ಬಿಟ್ಟರೆ ಈ ಲೋಕವು ನಿನ್ನನ್ನು ಬಿಟ್ಟಿರುವುದೆ?

**ಹರಿ**—(**ಸೈರಿಸಿಕೊಳ್ಳುತ್ತ**) ಗುರುದೇವ, ನನಗೆ ಈ ಲೋಕವು ಸಾಕು; ಈ ರಾಜ್ಯವು ಸಾಕು; ಈ ಸಂಸಾರವೆಲ್ಲ ಸಾಕು. ಎಲ್ಲವನ್ನೂ ಬಿಡಿಸಿ ನನ್ನನ್ನು ತಮ್ಮ ಪಾದದ ಬಳಿ ಇರಿಸಿಕೊಳ್ಳಬೇಕು.

**ವಿದ್ಯಾ**—ಹರಿಯಪ್ಪಾ, ಬೇಸರಗೊಳ್ಳಬೇಡ; ಲೋಕವು ನಿನಗೆ ಮಾಡಿರುವ ಅಪಕಾರವೇನು? ಅದನ್ನು ನೀನು ಕಾಣಬೇಕಾದ ರೀತಿಯಲ್ಲಿ ಕಂಡರೆ ಅದು ನಿನ್ನ ದುಃಖಶಮನಕ್ಕೇ ಸಾಧಕವಾದೀತು?

(ಕಂದ) ಪೆರರಿಕ್ಕುವ ಕಂಬನಿಗಳ।
ನೊರಸುವ ಕಾರ್ಯದಲಿ ಬಾಳ್ವ ಕಾರುಣಿಕಂ ತಾಂ ॥
ಸುರಿಯದೆ ಕಂಬನಿಗಳ ತ।
ನ್ನಿರವಂ ಪಯಣಿಗನ ತೆರದಿ ಕಳೆವಂ ಮುದದಿಂ ॥

ಹರಿಯಣ್ಣಾ, ರಾಜ್ಯ ಪರಿಪಾಲನೆಯಲ್ಲಿ ನೀನೀಗ ನಿರ್ವಿಣ್ಣನಾಗಬೇಡ. ಪ್ರಜೆಗಳನ್ನು ನೋಡಿ ದುಃಖವನ್ನು ದೂರಮಾಡು.

**ಹರಿ**—ಗುರುದೇವ, ಇದುವರೆಗೂ ನಾನು ಹಾಗೆ ಮಾಡಿರಲಿಲ್ಲವೆ? ಈ ರಾಜ್ಯವು ನನಗೆ ಭೋಗ್ಯವಸ್ತುವೆಂದು ಎಂದಾದರೂ ಭಾವಿಸಿದ್ದೆನೆ? ಇದೆಲ್ಲವೂ ವಿರೂಪಾಕ್ಷೇಶ್ವರನ ವೈಭವವೆಂದೂ ನಾನು ಆ ಮಹಾದೇವನ ಚಾರನೆಂದೂ ತಿಳಿದುಕೊಂಡಿದ್ದೆನಲ್ಲ!

**ವಿದ್ಯಾ**—ರಾಜ್ಯವು ವಿರೂಪಾಕ್ಷನದೆಂದಮೇಲೆ ಸೋಮಣ್ಣನೂ ವಿರೂಪಾಕ್ಷನವನೆಂದು ಏಕೆ ತಿಳಿಯಲಾರೆ? ಯಾವ ದೇವರ ಸನ್ನಿಧಿಯಿಂದ ಅವನು ಬಂದಿದ್ದನೋ ಆ ದೇವರ ಪಾದವನ್ನೇ ಅವನು ಸೇರಿಕೊಂಡನು. ನೀನು ಅಳುವುದೇಕೆ?

**ಹರಿ**—ಗುರುವೆ, ಆ ದೇವದೇವನು ನನ್ನನ್ನೇಕೆ ಕರೆದುಕೊಳ್ಳುವುದಿಲ್ಲ?

**ವಿದ್ಯಾ**—ನೀನು ಮಾಡಬೇಕಾದ ಕೆಲಸವಿನ್ನೂ ಇಲ್ಲಿದೆ. ಚಾರನಾದಮೇಲೆ ನೀನು ಎಲ್ಲಿರಬೇಕೆಂದು ನಿನ್ನ ಸ್ವಾಮಿ ನಿಯಮಿಸುವನೋ ಅಲ್ಲಿಯೇ ನೀನು ಸಂತೋಷದಿಂದ ಇರಬೇಕಲ್ಲವೆ?

**ಹರಿ**—ಹೌದು. ಆದರೆ ಇಲ್ಲಿ ಈ ದುಃಖವನ್ನು ಅನುಭವಿಸಬೇಕಾಗಿದೆ; ಲೋಕಾಂತರದಲ್ಲಿಯಾದರೂ ಇಂತಹ ದುಃಖವಿಲ್ಲದೆ ಇರಬಹುದಲ್ಲವೆ?

**ವಿದ್ಯಾ**—ದುಃಖವೆಂಬುದನ್ನು ಗಣಿಸುವವನಿಗೆ ಅದು ಎಲ್ಲೆಲ್ಲಿಯೂ ಇರುವುದು. ಅದನ್ನು ಗಣನೆಗೆ ತಾರದವನು ಎಲ್ಲಿದ್ದರೂ ಸುಖಿಯೇ.

**ಹರಿ**—ದುಃಖ ಬಂದಾಗ ಅದು ತಾನಾಗಿ ಗಣನೆ ಮಾಡಿಸಿಕೊಳ್ಳು ವುದಲ್ಲವೆ?

**ವಿದ್ಯಾ**—ಹರಿಯಪ್ಪಾ, ಸಾವಧಾನವಾಗಿ ವಿಚಾರಮಾಡೋಣ. ನಿದ್ರಿಸುವಾಗ ನೀನು ಸುಖ ದುಃಖಗಳನ್ನು ಅನುಭವಿಸುವುದುಂಟೆ? ಹೇಳು.

**ಹರಿ**—ಇಲ್ಲ.

**ವಿದ್ಯಾ**—ಕನಸಿನಲ್ಲಿ ನೀನು ಅನುಭವಿಸಿದ ಸುಖ ದುಃಖಗಳನ್ನು ಎದ್ದಿರುವ ಕಾಲದಲ್ಲಿ ಗಣನೆಗೆ ತೆಗೆದುಕೊಳ್ಳುವುದುಂಟೆ?

**ಹರಿ**—ಇಲ್ಲ.

**ವಿದ್ಯಾ**—ನೋಡು; ಸುಖ ದುಃಖಗಳನ್ನು ಮರೆಯುವುದೂ, ನೆನಪಿಗೆ ಬಂದರೂ ಅವನ್ನು ಎಣಿಕೆಗೆ ತೆಗೆದುಕೊಳ್ಳದಿರುವುದೂ ಎರಡೂ ನಿನ್ನ ನಡವಳಿಕೆಯಲ್ಲಿಯೇ ಇವೆ. ಸ್ವಪ್ನದಲ್ಲಿ ಕಂಡ ಸುಖ ದುಃಖಗಳು ಸುಳ್ಳೆಂದು ನೀನು ತಿಳಿದಿರುವೆಯಲ್ಲವೆ? ಎಚ್ಚರದಲ್ಲಿ ಕಾಣುವ ಸುಖ ದುಃಖಗಳೂ ಹಾಗೆಯೇ ಸುಳ್ಳೆಂದು ನೀನು ಏಕೆ ತಿಳಿದುಕೊಳ್ಳುವುದಿಲ್ಲ?

**ಹರಿ**—ಎಲ್ಲವೂ ಸುಳ್ಳಾದರೆ ದಿಟವಾವುದು?

**ವಿದ್ಯಾ**—ಸುಳ್ಳು ದಿಟಗಳ ವಿಚಾರಣೆಗೆ ಯಾವುದು ಆಧಾರವೋ ಅದೊಂದೇ ದಿಟ. "ನಾನು ನಿದ್ದೆ ಹೋದೆ, ನಾನು ಕನಸು ಕಂಡೆ, ನಾನು ಎದ್ದು ಓಡಾಡಿದೆ" ಎಂದು ತಿಳಿದುಕೊಳ್ಳುವ ನೀನು ದಿಟ. ನಿನ್ನ ನಿದ್ದೆ, ನಿನ್ನ ಕನಸು, ನಿನ್ನ ಓಡಾಟಗಳೆಲ್ಲವೂ ಸುಳ್ಳು; ಅವು ನಿನ್ನ ಮನಸ್ಸಿನ ಕಲ್ಪನೆಗಳು.

**ಹರಿ**—ನಾನು ಮಾಡುವ ವ್ಯಾಪಾರಗಳೆಲ್ಲ ಸುಳ್ಳಾದರೆ ಆ ವ್ಯಾಪಾರಗಳನ್ನು ನಾನೇಕೆ ಮಾಡಬೇಕು?

**ವಿದ್ಯಾ**—ದೇಹವನ್ನು ಧರಿಸಿರುವುದರಿಂದ ಮಾಡಬೇಕು. "ನಾನು ಮಾಡುವುದಿಲ್ಲ"ವೆಂದು ನೀನು ನಿಶ್ಚಯಿಸಿಕೊಂಡು ಒಂದು ಕಡೆ ಸುಮ್ಮನೆ ಕುಳಿತರೆ ಆಗ ಅದೂ ಒಂದು ಬಗೆಯ ಮಾಡಿಕೆಯೇ ಆಗು

ವುದು. ದೇಹವಿರುವವರೆಗೂ ಯಾವುದೋ ಒಂದು ಬಗೆಯಲ್ಲಿ ಕೆಲಸ ಮಾಡುವುದು ತಪ್ಪದು.

**ಹರಿ**—ಮಾಡಿದ ಮೇಲೆ ಆದರ ಫಲವು ಹಿಂದುಗೂಡಿ ಬರುವುದಲ್ಲವೆ? ಅದನ್ನು ಈಗಲೋ ಇನ್ನೊಂದು ಜನ್ಮದಲ್ಲೋ ಅನುಭವಿಸಬೇಕಾಗುವುದಲ್ಲವೆ?

**ವಿದ್ಯಾ**—ಜ್ಞಾನದಿಂದ ಅದನ್ನು ತಪ್ಪಿಸಿಕೊಳ್ಳಲಾಗುವುದು. ಕರ್ಮಫಲದ ಸಂಬಂಧವಿಲ್ಲದ ರೀತಿಯಲ್ಲಿ ಕರ್ಮ ಮಾಡುತ್ತಿರುವುದೇ ಜ್ಞಾನಿಯ ವಿಶೇಷ ಲಕ್ಷಣ.

**ಹರಿ**—ಗುರುದೇವ, ನೆಲದಮೇಲೆ ಬಿದ್ದ ಬೀಜವು ಮೊಳೆಯದೆ ಹೋಗುವುದುಂಟೆ?

**ವಿದ್ಯಾ**—ಉಂಟು. ಹುರಿದ ಬೀಜವು ಮೊಳೆಯಲಾಗುವುದೆ? ಜ್ಞಾನಿಯ ಕರ್ಮವು ಅದರಂತೆ. ಜ್ಞಾನಾಗ್ನಿಯು ಅವನ ಕರ್ಮಬೀಜದ ಅಂಕುರಾಂಶವನ್ನು ಸುಟ್ಟುಹಾಕಿರುವಾಗ ಅದು ಹೇಗೆ ಮೊಳೆತೀತು? ಅದು ಸದ್ಯಕ್ಕೆ ಮಾತ್ರ ಹುರಿದ ಬೀಜದಂತೆ ಆಹಾರವಾಗಿ ಪರಿಣಮಿಸಬಹುದು.

**ಹರಿ**—ಆಹಾ! .....ಆ ಅಗ್ನಿ ಸಮಾನವಾದ ಜ್ಞಾನವಾದರೂ ಎಂತಹುದು? ಅದನ್ನು ವಿವರಿಸಿ ನನ್ನ ದುಃಖವನ್ನು ಪರಿಹರಿಸಬೇಕು.

**ವಿದ್ಯಾ**—ಹರಿಹರೇಶ್ವರಾ, ನಮ್ಮ ವ್ಯಾಪಾರಗಳೆಲ್ಲಕ್ಕೂ ಆಶ್ರಯವಾಗಿರುವ ಈ ಪ್ರಪಂಚವು ಪರಮೇಶ್ವರನ ನಾಟಕಶಾಲೆ. ಆತನು ಆನಂದಮಯನು. ಈ ನಾಟಕಶಾಲೆಯಲ್ಲಿ ಆತನು ವಿಧ ವಿಧವಾಗಿ ಲೀಲೆಗಳನ್ನು ತೋರುತ್ತಿರುವನು. ಪಂಚಭೂತಗಳು ಮೊದಲಾಗಿ, ಸಸ್ಯ ವೃಕ್ಷಗಳೂ, ಕ್ರಿಮಿಕೀಟಗಳೂ, ಪಕ್ಷಿ ಮೃಗಗಳೂ, ದೇವ ಮಾನುಷ ವರ್ಗಗಳೂ, —ನಮಗೆ ಗೋಚರಿಸುವ ಎಲ್ಲವೂ ಆ ಪರಮೇಶ್ವರನು ತನ್ನ ಮಾಯಾ ಶಕ್ತಿಯಿಂದ ಕಲ್ಪಿಸಿಕೊಂಡಿರುವ ವೇಷ ವಿಶೇಷಗಳೇ. ಎಷ್ಟೋ ವೇಷಗಳಲ್ಲಿ ತಾನು ಇಂತಹವನೆಂಬುದನ್ನೇ ಆತನು ಮರೆತಿರುವಂತೆ ತೋರುತ್ತದೆ.

ಹೀಗೆ ಯಾವ ಯಾವ ಅವತಾರಗಳಲ್ಲಿ ಆತನು ಸ್ವಸ್ವರೂಪವನ್ನು ಮರೆತಿರುವಂತೆ ತೋರುವುದೋ, ಅಲ್ಲಿ ಆತನು ಜೀವನೆನ್ನಿಸಿಕೊಂಡು, ಆ ಅವಸ್ಥೆಯ ಧರ್ಮಾಧರ್ಮಗಳಿಗೆ ಅನುರೂಪವಾದ ವೇಷಾಂತರಗಳನ್ನು ಹೊಸ ಹೊಸದಾಗಿ ಪಡೆಯುತ್ತಿರುವನು. ಹುಟ್ಟು ಸಾವುಗಳೆಂಬುದು ಬರಿಯ ತೋರಿಕೆ. ವೇಷಧಾರಿಯು ತನ್ನ ವಸ್ತ್ರಾಲಂಕಾರಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಬೇರೆ ಮಾಡುವ ರೀತಿಯಲ್ಲಿ, ಜೀವನು ದೇಹಗಳನ್ನು ಬೇರೆ ಬೇರೆ ಪಡೆಯುತ್ತಿರುವನು. ಹೀಗೆ ಬೇರೆ ಬೇರೆ ದೇಹಗಳನ್ನು ಪಡೆಯುತ್ತಿರುವಾಗ ಆಯಾ ದೇಹವೇ ತಾನೆಂದು ಜೀವನು ಭ್ರಮಿಸಿರುವುದುಂಟು. ಆ ಭ್ರಮೆಯೇ ದುಃಖ ಮೂಲ. ಅದರಿಂದಲೇ ''ಇವರು ನನ್ನ ಪತ್ನೀ ಪುತ್ರರು; ಅವರು ನನ್ನ ದಾಸ ದಾಸಿಯರು; ಇವರು ನನ್ನ ಮಿತ್ರರು; ಅವರು ನನ್ನ ಶತ್ರುಗಳು'' ಎಂಬ ರಾಗ ದ್ವೇಷಗಳು ಹುಟ್ಟುವುವು. ಈ ಮಮತೆ ಮೋಹಗಳೇ ಚಿತ್ತೋದ್ವೇಗಕ್ಕೆ ಕಾರಣಗಳು. ದೇಹವು ತಾನಲ್ಲವೆಂದೂ ಅದು ತನ್ನ ವೇಷವೆಂದೂ ಜೀವನು ಸ್ಮರಣೆಗೆ ತಂದುಕೊಂಡೊಡನೆಯೇ, ದೇಹದ ಮೂಲಕ ಬಂದ ಸುಖ ದುಃಖಗಳೆಲ್ಲವೂ ಕೃತಕಗಳೆಂದು ಅವನಿಗೆ ತೋರುವುದು. ಇಂತಹ ಕೃತಕಾನುಭವಗಳನ್ನು ಮಾಯೆಯ ಕೈಯಿಂದ ಮಾಡಿಸಿಕೊಳ್ಳುತ್ತಿರುವುದು ಭಗವಂತನ ಅನಾದಿ ಲೀಲೆ. ಇದರ ತತ್ತ್ವವನ್ನು ಕಂಡುಕೊಂಡೊಡನೆಯೆ ಜೀವನ ಜೀವಭಾವವು ಇಲ್ಲವಾಗುವುದು. ಆ ಮೇಲೆ ಅಂಥಾ ಮನುಷ್ಯನನ್ನಾವ ಕಳಂಕವೂ ಸೋಕದು; ಆವ ಪಾಶವೂ ಕಟ್ಟದು. ''ಎಲ್ಲ ಬಂಧನಗಳೂ ಲೀಲಾಜನಿತವಾದುವು. ಎಲ್ಲ ಸಂಬಂಧಗಳೂ ಮಾಯಾ ಕಲ್ಪಿತವಾದುವು''—ಎಂದು ಆತನು ಕಂಡುಕೊಳ್ಳುವನು. ಹಾಗೆ ಕಂಡುಕೊಂಡಿರುವ ಜೀವಿಯೇ ಜ್ಞಾನಿ. ಆತನಿಗೆ ಆಗಬೇಕಾದ ಲಾಭವು ಯಾವುದೂ ಇರದು. ಆದರೆ, ನಮ್ಮ ಉಚ್ಛ್ವಾಸ ನಿಃಶ್ವಾಸಗಳು ನಮ್ಮ ಪ್ರಯತ್ನವಿಲ್ಲದೆಯೇ ನಮ್ಮ ದೇಹಗಳಲ್ಲಿ ನಡೆಯುತ್ತಿರುವಂತೆ, ಸಕಲ ಶುಭಗಳೂ ಅವನಿಂದ ಸ್ವತಃ ಸಿದ್ಧವಾಗಿ ನಡೆಯುತ್ತಿರುವುವು. ಕೈಯಲ್ಲಿ ಹುವ್ವನ್ನು ಹಿಡಿದು ಮಲಗಿದವನು ನಿದ್ರಿಸಿದ ಬಳಿಕ ಆ ಹುವ್ವು ತಾನಾಗಿ ಜಾರಿ ಕೆಳಕ್ಕೆ ಬೀಳುವಂತೆ, ಅವನ ಕರ್ಮಗಳ ಫಲಗಳು ತಾವಾಗಿ ಅವನಿಂದ ಜಾರಿ ಬೀಳುವುವು.

"ಈ ಕೆಲಸವನ್ನು ಮಾಡಿದರೆ ತನಗೊಳ್ಳೆಯದಾದೀತು," "ಆ ಕೆಲಸವನ್ನು ಮಾಡದೆ ಬಿಟ್ಟರೆ ತನಗೆ ಕೇಡಾದೀತು" ಎಂಬ ಆಶೆ ಭೀತಿಗಳಿಂದ ಆತನು ಕೆಲಸಕ್ಕೆ ಕೈಹಾಕುವುದಿಲ್ಲ. ಪ್ರಕಾಶವನ್ನು ಹರಡುವುದೇ ನಕ್ಷತ್ರಗಳ ನೈಜ ಧರ್ಮವಾಗಿರುವಂತೆ, ಪರಿಮಳವನ್ನು ಬೀರುವುದೇ ಪಾರಿಜಾತದ ಸ್ವಭಾವವಾಗಿರುವಂತೆ, ಪಂಚಮಸ್ವರದಿಂದ ಹಾಡುವುದೇ ಕೋಗಿಲೆಯ ಸಹಜ ಗುಣವಾಗಿರುವಂತೆ, ಲೋಕಹಿತವನ್ನೆಸಗುವುದೇ ಜ್ಞಾನಿಗೆ ಸ್ವಾಭಾವಿಕ ಕೃತ್ಯವಾಗಿರುವುದು. ಆತನಿಂದ ಯಾರಿಗೂ ಹಾನಿಯಾಗದು; ಏಕೆಂದರೆ ಆತನು ತನ್ನಾತ್ಮದ ವಿನಾ ಬೇರೊಂದನ್ನು ಎಲ್ಲಿಯೂ ಕಾಣನು. "ತಾನು ಬೇರೆ, ತನ್ನ ಸುತ್ತಮುತ್ತಲಿರುವವರು ಬೇರೆ" ಎಂಬ ಭ್ರಾಂತಿಯು ಆತನನ್ನು ಮುಟ್ಟದು. ಜಗದ್ವ್ಯಾಪಾರವೆಂಬ ಮಹಾಲೀಲೆಯಲ್ಲಿ ತನ್ನ ಜೀವನವು ಒಂದು ಉಪಲೀಲೆಯೆಂದು ಆತನು ಭಾವಿಸಿ, ಕಾಲ ದೇಶ ಸಂಘಟನೆಗಳನ್ನನುಸರಿಸಿ ಎಲ್ಲ ಕರ್ಮಗಳನ್ನೂ ಮಾಡುವನು; ಆದರೆ ಯಾವುದರಲ್ಲಿಯೂ ಸ್ವಾಭಿಮಾನವನ್ನಿಡನು. ರಂಗಸ್ಥಲದಲ್ಲಿ ವೇಷಧಾರಿಗಳಾಗಿ ಬಂದ ಇಬ್ಬರು ಮಿತ್ರರು ಕಥಾ ಸಂದರ್ಭಾನುಸಾರವಾಗಿ ಪರಸ್ಪರ ಶತ್ರುತ್ವವನ್ನಭಿನಯಿಸಿದರೂ ಅಂತರಂಗದಲ್ಲಿ ಪ್ರೀತಿಯನ್ನೇ ಇಟ್ಟಿರುವಂತೆ, ಜ್ಞಾನಿಯು ಲೌಕಿಕ ಕಾರ್ಯಗಳಲ್ಲಿ ಪ್ರವೃತ್ತನಾಗಿದ್ದರೂ ಅವನ ಚರ್ಚೆಯು ನಟನೆ ಮಾತ್ರವಾಗಿ, ಅವನ ಆಂತರಿಕ ವೃತ್ತಿಗೆ ಸಂಬಂಧಿಸದೆ ಇರುವುದು. ಅಂತಹವನಿಗೆ ದುಃಖವೆಲ್ಲಿಂದ ಬರಬೇಕು? ಹೊರಗಿನ ಪ್ರಪಂಚದಲ್ಲಿ ಆಗುವ ವೃದ್ಧಿ ನಷ್ಟಗಳು ಮಾಯಾಕಾರ್ಯಗಳೆಂಬುದನ್ನು ಅವನು ಮರೆಯನು; ಅಂತರಾತ್ಮನು ಅಸಂಗನೆಂಬುದನ್ನು ಅವನು ಮರೆಯನು. ಸರೋವರದ ನೀರು ತನ್ನ ಮಧ್ಯದಲ್ಲಿರುವ ತಾವರೆಯ ಎಲೆಯನ್ನು ತೋಯಿಸಲಾರದೆ ಇರುವಂತೆ, ಸಂಸಾರದ ಖೇದಗಳು ಅವನ ಮನಸ್ಸನ್ನು ನೋಯಿಸಲಾರವು. ಹರಿಹರೇಶ್ವರಾ, ಇದೇ ವೇದ ವೇದಾಂತಗಳ ಮುಖ್ಯ ರಹಸ್ಯವು. ಇದನ್ನು ನೀನು ಚೆನ್ನಾಗಿ ತಿಳಿದು ಅನುಸಂಧಾನ ಮಾಡು. ಹಿಂದೆ ಜನಕಾದಿ ಚಕ್ರವರ್ತಿಗಳು ಅದನ್ನು ಅನುಸಂಧಾನ ಮಾಡಿ ರಾಜ್ಯವನ್ನು ಪರಿಪಾಲಿಸಿ ಪರಮಗತಿಯನ್ನು ಪಡೆದರು. ಅವರ ದಾರಿಯನ್ನು

ನೀನು ಅನುಸರಿಸು. ವಿವೇಕಶಾಲಿಯಾದ ನೀನು ಶೋಕಿಸುವುದು ತರವಲ್ಲ.

**ಹರಿ**—ಗುರುವರೇಣ್ಯ, ತಮ್ಮ ವಾಕ್ಯಗಳು ಅಮೃತಪ್ರಾಯ ವಾಗಿವೆ. ಆದರೆ ತಾವು ತೋರಿರುವ ದಾರಿಯಲ್ಲಿ ನಡೆಯಲು ನನಗೆ ಶಕ್ತಿಯುಂಟೆ?

**ವಿದ್ಯಾ**—ಹರಿಯಣ್ಣಾ, ಅದು ಅಭ್ಯಾಸದಿಂದ ಸಾಧ್ಯವಾಗುವುದು. ನೀನು ಆಗಾಗ ವೇದಾಂತ ರಹಸ್ಯಗಳನ್ನು ಕೇಳುತ್ತಿರಬೇಕು; ಹಾಗೆ ವಿಚಾರದಿಂದ ಸ್ಪಷ್ಟವಾದುದನ್ನು ನಡತೆಯಲ್ಲಿ ಬಳಕೆಗೆ ತಂದುಕೊಳ್ಳ ಬೇಕು. ಇದೆಲ್ಲವೂ ಕಾಲಕ್ರಮದಲ್ಲಿ ಆಗುವುದು.

**ಹರಿ**—ಗುರುದೇವ, ಇದುವರೆಗೂ ಪರಮ ತತ್ತ್ವವೇನೆಂಬು ದನ್ನು ಚಿಂತಿಸದೆ ಆಯುಷ್ಯವನ್ನು ಕಳೆದೆ. ಇನ್ನಾದರೂ ತಮ್ಮ ಪಾದುಕಾ ಪ್ರಸಾದದಿಂದ ತಿಳಿವನ್ನು ಪಡೆದುಕೊಳ್ಳಬೇಕೆಂದು ಕುತೂ ಹಲವಾಗಿದೆ. ಅನುಜ್ಞೆಯಾದರೆ ರಾಜ್ಯಭಾರವನ್ನು ಆದಷ್ಟು ಮಾತ್ರ ಬುಕ್ಕಣ್ಣನಲ್ಲಿ ನಿಲ್ಲಿಸಿ, ದೊರೆತ ಕಾಲವನ್ನು ತಮ್ಮ ಸನ್ನಿಧಿಯಲ್ಲಿ ಕಳೆಯ ಬೇಕೆಂದು ಮನಸ್ಸು ಪ್ರೇರಿಸುತ್ತದೆ.

**ವಿದ್ಯಾ**—ಹಾಗೆ ಮಾಡಬಹುದು. ಬುಕ್ಕಣ್ಣನಿಗೆ ಯೌವರಾಜ್ಯ ಪಟ್ಟವನ್ನು ಕಟ್ಟಿದರೆ ಅವನಿಗೆ ರಾಜಕಾರ್ಯಾನುಭವವುಂಟಾಗಿ ಮುಂದೆ ನಿನ್ನ ಕೆಲಸವನ್ನು ನಡೆಯಿಸಲು ಅವನು ಅರ್ಹನಾಗುವನು. ತತ್ತ್ವ ವಿಚಾರಕ್ಕೆ ಬೇಕಾದ ಪ್ರಪಂಚಾನುಭವವೂ ಮನಃಪರಿಪಾಕವೂ ನಿನಗೆ ಈಗ ಉಂಟಾಗಿವೆ. ಆದಕಾರಣ ನಿನ್ನ ಆಲೋಚನೆಯು ಯುಕ್ತವಾದುದೇ ಸರಿ. ಪರಮಾರ್ಥವನ್ನು ವಿವರಿಸಿ ಹೇಳುವುದರಲ್ಲಿ ನಮ್ಮ ಗುರುವರ್ಯ ರಾದ ಭಾರತೀತೀರ್ಥ ಸ್ವಾಮಿಗಳ ಕೀರ್ತಿಯು ಅಸಮಾನವಾಗಿದೆ. ನೀನು ಅವರ ದರ್ಶನಕ್ಕಾಗಿ ಆಗಾಗ ಶೃಂಗಗಿರಿಗೆ ಹೋಗುವೆಯೆಂದು ನಾನು ಅವರಿಗೆ ಬಿನ್ನಯಿಸುವೆನು.

**ಹರಿ**—ತಮ್ಮ ಕೃಪೆಯು ಅಪಾರವಾದುದು. ಚಿಕ್ಕಂದಿನಲ್ಲಿ ತಂದೆ ಯಂತೆ ಪೋಷಿಸಿದಿರಿ; ಆಮೇಲೆ ಕುಲಪುರೋಹಿತರಾಗಿ ಶುಭ ಪರಂಪರೆ

ಯನ್ನು ಸಾಧಿಸಿಕೊಟ್ಟಿರಿ; ಈಗ ಪರಮಾಚಾರ್ಯರಾಗಿ ಜ್ಞಾನದೀಪ ವನ್ನು ಹಿಡಿದು ನಿತ್ಯ ಸುಖದ ಮಾರ್ಗವನ್ನು ತೋರುತ್ತಿರುವಿರಿ. (**ಕಂಬನಿಯಿಡುತ್ತ**) ಗುರುದೇವ, ನನ್ನ ಹೃದಯದಲ್ಲಿ ಉಕ್ಕುತ್ತಿರುವ ಭಾವವು ಹೊರಗೆ ಕಾಣಿಸಿಕೊಳ್ಳಬೇಕೆನ್ನುವುದು; ಆದರೆ ನನಗೆ ಬಾಯಿಲ್ಲ.

[**ಪ್ರಣಾಮಮಾಡುವನು, ತೆರೆ ಬೀಳುವುದು.**

---

## ದೃಶ್ಯ ೬

[**ವಿಜಯನಗರದಲ್ಲೊಂದು ಬೀದಿ. ಅರುಣೋದಯಕ್ಕೆ ಹಿಂದಿನ ಸಮಯ. ಕೆಲಮಂದಿ ಪುರಜನರು ಗುಂಪುಗೂಡಿ ಮಾತನಾಡುತ್ತಿರುವರು.**]

**೧ ನೆಯವನು**—ರಾತ್ರಿಯೆಲ್ಲಾ ಏನೇನೋ ಕನಸು! ಏಕೋ ನಿದ್ದೆ ಚೆನ್ನಾಗಿ ಬರಲಿಲ್ಲ!

**೨ ನೆಯವನು**—ನನಗೂ ಹಾಗೆಯೇ ಆಯಿತು; ನಿದ್ದೆಯೇ ಇಲ್ಲ!

**೩ ನೆಯವನು**—ಅದೇನಯ್ಯಾ, ನನಗೂ ಕನಸುಗಳು? ಅದಕ್ಕೋಸ್ಕರವೇ ಹಾಸಿಗೆ ಬಿಟ್ಟು ಎದ್ದು ಬಂದೆ.

**೪ ನೆಯವನು**—ಎಂಥಾ ಕನಸು?

**೩ ನೆಯವನು**—ಅದೊಂದು ವಿಚಿತ್ರ! ವಿರೂಪಾಕ್ಷೇಶ್ವರನ ದೇವಸ್ಥಾನದಲ್ಲಿ ಸ್ವಾಮಿಗೆ ಆಗತಾನೆ ಪೂಜೆಯಾಗಿದೆ. ಹುವ್ವು ಪತ್ರೆಗಳು ಇನ್ನೂ ಬಾಡಿಲ್ಲ. ಅಖಂಡ ದೀಪಗಳು ಚೆನ್ನಾಗಿ ಉರಿಯುತ್ತಿವೆ. ಆದರೆ ಅರ್ಚಕನೂ ಇನ್ನಾರೂ ಗುಡಿಯೊಳಗಿಲ್ಲ. ಒಬ್ಬ ಆಜಾನುಬಾಹು ಮನುಷ್ಯ ಮಾತ್ರ ದೇವರ ಎದುರಿಗೆ ಏನೇನೋ ಸ್ತೋತ್ರಗಳನ್ನು ಹೇಳಿ, ನಮಸ್ಕಾರಮಾಡಿ ಎದ್ದು ನಿಂತು "ಸ್ವಾಮಿ, ಈಶ್ವರಾ, ಈ ಕತ್ತಿ ಬಹು ಹಳೆಯದಾಯಿತು. ಇದನ್ನು ನೀನು ಒಪ್ಪಿಸಿಕೊಂಡು ಹೊಸ ಕತ್ತಿಯೊಂದನ್ನು ಕೊಡು" ಎಂದು ಹೇಳಿ ಪ್ರಾರ್ಥನೆ ಮಾಡಿ, ತನ್ನ

ಸೊಂಟಕ್ಕೆ ಕಟ್ಟಿಕೊಂಡಿದ್ದ ಕತ್ತಿಯನ್ನು ಒರೆಯಿಂದ ಹೊರಕ್ಕೆ ತೆಗೆದು ದೇವರ ಮುಂದೆ ಇಟ್ಟ. ಏನು ಹೇಳಲಿ ಆ ಅದ್ಭುತವನ್ನ? ಆ ಕ್ಷಣವೇ ಒಂದು ದೊಡ್ಡ ಮಿಂಚು ಬಡಿದಹಾಗಾಯಿತು. ಪುನಃ ನೋಡಿದರೆ ಅವನು ಅಲ್ಲಿಟ್ಟಿದ್ದ ಕತ್ತಿ ಮಾಯವಾಗಿ ಅದಕ್ಕೆ ಪ್ರತಿಯಾಗಿ ಇನ್ನೊಂದು ದೊಡ್ಡ ಕತ್ತಿ ಜಾಜ್ವಲ್ಯಮಾನವಾಗಿ ಕಾಣಿಸುತ್ತಿತ್ತು. ಆ ಮನುಷ್ಯನು ದೇವರಿಗೆ ನಮಸ್ಕಾರಮಾಡಿ ಆ ಹೊಸ ಕತ್ತಿಯನ್ನು ಕೈಯಲ್ಲಿ ಹಿಡಿದು ಹೊರಕ್ಕೆ ನಡೆದ. ಹೋಗುವಾಗ ಅವನು ನನ್ನ ಕಡೆಗೆ ತಿರುಗಿ ನನ್ನ ಮುಖವನ್ನು ನೋಡಿದ. ನನ್ನ ಗತಿ ಏನಾಗಿರಬೇಕು? ನಾನು ಕಿರಿಚಿ ಕೊಂಡು ಕಣ್ಣುಮುಚ್ಚಿಬಿಟ್ಟೆ! ಆಮೇಲೆ ಕಣ್ಣು ತೆರೆದರೆ ಅಲ್ಲೇನಿದೆ? ಬರಿಯ ಹಾಸಿಗೆ! ಆದರೂ ಆ ಸ್ವಪ್ನವೆಲ್ಲ ಈಗಲೂ ಕಣ್ಣಿಗೆ ಕಟ್ಟಿದ ಹಾಗಿದೆ.

**೪ನೆಯವನು**—ಇದೇನಯ್ಯಾ ಬಹು ಆಶ್ಚರ್ಯವಾಗಿದೆ?

**೨ನೆಯವನು**—ನನಗೆ ಆದ ಕನಸು ಇನ್ನೊಂದು ರೀತಿ. ವಿರೂಪಾಕ್ಷೇಶ್ವರನ ರಥೋತ್ಸವ. ಬೇಕಾದ ಹಾಗೆ ಮೇಳ ತಾಳಗಳೂ ಕೊಂಬು ಕಹಳೆಗಳೂ ಧ್ವನಿಮಾಡುತ್ತಿವೆ. ಜನರು ಕಿಕ್ಕಿರಿಯುತ್ತಿದ್ದಾರೆ. ತೇರು ಸಾಗಿ ಅರಮನೆಯ ಮುಂದೆ ನಿಂತಿದೆ. ಅಲ್ಲಿ ದೇವರಿಗೆ ಮಹಾಮಂಗಳಾರತಿ ನಡೆಯಿತು. ಎಲ್ಲರಿಗೂ ಪ್ರಸಾದ ಹಂಚಿದರು. ಆಮೇಲೆ ತೇರು ಮುಂದಕ್ಕೆ ಜರುಗಿತು. ಕೂಡಲೆ ಜನರು "ಹರಹರ ಮಹಾದೇವ!" ಎಂದು ಕೂಗಿದರು. ಆ ಶಬ್ದದಿಂದ ನನಗೆ ಎಚ್ಚರಿಕೆಯಾಯಿತು. ಕಣ್ಣು ತೆರೆದು ನೋಡಿದರೆ ಏನೂ ಇಲ್ಲ.

**೧ನೆಯವನು**—ಇದೂ ವಿಚಿತ್ರವಾಗಿದೆ! ನನ್ನ ಕನಸು ನೋಡಿ: ಅರಮನೆಯ ಕಡೆಯಿಂದ ಯಾವುದೋ ಮೆರವಣಿಗೆ ಹೊರಟಿದೆ. ಹೊತ್ತು ಸಾಯಂಕಾಲವಾಗಿದೆ. ಬೇಕಾದಷ್ಟು ಪಂಜುಗಳು ಉರಿಯುತ್ತಿವೆ. ವಾದ್ಯಗಳ ಕೋಲಾಹಲ ವಿಶೇಷವಾಗಿದೆ. ಅದೇನೋ ನೋಡಬೇಕೆಂದು ನಾನೂ ಅತ್ತಕಡೆ ಓಡುತ್ತಿದ್ದೇನೆ, ನಾನು ಸಮೀಪಕ್ಕೆ ಹೋಗುವಷ್ಟರೊಳಗಾಗಿ ಆ ಪಂಜುಗಳೆಲ್ಲಾ ಮಂಕಾದುವು. ಅಷ್ಟರಲ್ಲಿ "ಬೇರೆ

ಪಂಜುಗಳನ್ನು ಹಚ್ಚಿರಿ'' ಎಂದು ಯಾರೋ ಕೂಗಿಕೊಂಡರು. ಆಗ ಪಂಜಿನವರು ಹೊಸ ಪಂಜುಗಳನ್ನು ತಂದು ಹಳೆಯ ಪಂಜುಗಳ ಸಣ್ಣ ಉರಿಗೆ ಹಿಡಿದರು. ಕೂಡಲೆ ಹೊಸ ಪಂಜುಗಳಿಂದ ಭಗ್ಗನೆ ದೊಡ್ಡ ಜ್ವಾಲೆಗಳು ಎದ್ದವು. ಆ ಬೆಳಕಿನಿಂದ ನಾನು ಹೆದರಿ ಕಣ್ಣು ಬಿಟ್ಟೆ! ನೋಡಿದರೆ ಸುತ್ತಲೂ ಕತ್ತಲೆಯೇ.

**೪ ನೆಯವನು**—ಇದೆಲ್ಲಾ ನೋಡಿದರೆ ಏನೋ ವಿಶೇಷ ಸಂಗತಿ ನಡೆಯುವ ಹಾಗೆ ಮನಸ್ಸಿಗೆ ತೋರುತ್ತದೆ.

**೫ ನೆಯವನು**—ನನಗೂ ಹಾಗೆಯೇ ತೋರುತ್ತದೆ.

**೧ ನೆಯವನು**—ತಾಳಿ, ತಾಳಿ. ಅದೇನೋ ಶಬ್ದವಾಗುತ್ತಿದೆ.

**೨ ನೆಯವನು**—(ಆಲಿಸಿ ಕೇಳಿ) ಅದೇನೋ ಕೆಟ್ಟ ಸ್ವರವಾಗಿದೆ ಯಲ್ಲಾ!

**೩ ನೆಯವನು**—ಅಗೋ, ಅಲ್ಲೊಂದು ಗುಂಪು ಬರುತ್ತಿದೆ ನೋಡು.

**೪ ನೆಯವನು**—ತ್ರಿವಿಕ್ರಮಶಾಸ್ತ್ರಿಗಳೂ ಅಲ್ಲಿ ಬರುತ್ತಿದ್ದಾರೆ.

**೫ ನೆಯವನು**—ಈ ಹೊತ್ತೇನೋ ಬೆಳಗಾಗುವ ಲಕ್ಷಣ ಚೆನ್ನಾಗಿಲ್ಲ!

[ತ್ರಿವಿಕ್ರಮಶಾಸ್ತ್ರಿಯೂ ಖಿನ್ನ ಮುಖದ ಜನರನೇಕರೂ ಪ್ರವೇಶಿಸುವರು. ಶಾಸ್ತ್ರಿಯು ನಿಲ್ಲುವನು. ಗುಂಪು ಮುಂದೆ ಹೋಗುವುದು.]

**೧ ನೆಯವನು**—ಏನು ಶಾಸ್ತ್ರಿಗಳೇ, ಏನು ಸಮಾಚಾರ?

**ತ್ರಿವಿಕ್ರಮ**—ಇನ್ನೂ ತಿಳಿಯದೆ? ಮಹಾರಾಯನು ನಮ್ಮನ್ನು ಬಿಟ್ಟುಹೋದನಲ್ಲಾ!

**೨ ನೆಯವನು**—ಏನು? ಮಹಾರಾಜರೆ? ಹೋದರೆ?

**೩ ನೆಯವನು**—ಅಯ್ಯೋ! ಸರಿಯಾಗಿ ಹೇಳಿ ಶಾಸ್ತ್ರಿಗಳೆ!

**೪ ನೆಯವನು**—ನಮ್ಮ ಹರಿಹರ ಮಹಾರಾಜರು ಸೌಖ್ಯದಲ್ಲಿರುವರಷ್ಟೆ?

**ತ್ರಿವಿಕ್ರಮ**—ಇಲ್ಲವಪ್ಪಾ! ನಮ್ಮನ್ನು ಕಾಪಾಡುತ್ತಿದ್ದ ತಂದೆ,–ಹರಿಹರ ಮಹಾರಾಯರು—ನಮ್ಮನ್ನೆಲ್ಲಾ ಕೈಬಿಟ್ಟ......

**೧ನೆಯವನು**—ಅಯ್ಯೋ, ಅದಾವಾಗ?

**೨ನೆಯವನು**—ಅಯ್ಯೋ, ನಮಗಿನ್ನೇನು ಗತಿ?

**೩ನೆಯವನು**—ಅಯ್ಯೋ ವಿಧಿಯೇ, ನಿನಗೆಷ್ಟು ಹೊಟ್ಟೆಯ ಕಿಚ್ಚು! ಜನರು ಇನ್ನೂ ಈಗೀಗ ತಲೆಯೆತ್ತುತ್ತಿದ್ದರಲ್ಲಾ!

**೪ನೆಯವನು**—ಶಾಸ್ತ್ರಿಗಳೇ, ದೊರೆಗಳಿಗೇನು ಆರೋಗ್ಯ ತಪ್ಪಿತ್ತೆ? ಯಾರಿಗೂ ಆ ಸಂಗತಿ ತಿಳಿದಿರಲಿಲ್ಲವಲ್ಲಾ!

**ತ್ರಿವಿಕ್ರಮ**—ಅಯ್ಯಾ, ಅವರು ಪುಣ್ಯವಂತರು. ಅಂಥವರಿಗೆ ರೋಗ ಹೇಗೆ ಬರಬೇಕು? ಅನಾಯಾಸವಾಗಿ ಅವರು ದೇವರ ಪಾದ ಸೇರಿಕೊಂಡರು.

**೧ನೆಯವನು**—ಅವರು ಪುಣ್ಯಶಾಲಿಯೆನ್ನುವುದಕ್ಕೆ ತಡೆಯೇನು? ನಾವು ಮಾತ್ರ ನಿರ್ಭಾಗ್ಯರು.

**೨ನೆಯವನು**—ಅದು ನಿಜ. ಆತನೇನೋ ಅಂಶಪುರುಷನೇ.

**೩ನೆಯವನು**—ದೈವಾಂಶವಿಲ್ಲದವನಾದರೆ ತುರುಕರನ್ನಡಗಿಸುವುದೆಂದರೇನು? ಇಂಥಾ ರಾಮರಾಜ್ಯವನ್ನು ಸ್ಥಾಪಿಸುವುದೆಂದರೇನು?

**೪ನೆಯವನು**—ಧನ್ಯನಯ್ಯಾ ನಮ್ಮ ದೊರೆ! ದೊಡ್ಡವರ ಸೇವೆ ಮಾಡಿದ, ದೊಡ್ಡ ರಾಜ್ಯವನ್ನು ಕಟ್ಟಿದ, ದೊಡ್ಡ ಕೆಲಸಗಳನ್ನು ಮಾಡಿಸಿದ, ದೊಡ್ಡ ಹೆಸರು ಸಂಪಾದಿಸಿದ. ಆತನು ಹೋದರೂ ಆತನ ಕೀರ್ತಿ ಹೋಗುವಹಾಗಿಲ್ಲ.

**೫ನೆಯವನು**—ಆತನ ಬದುಕೂ ಆತನ ಸಾವೂ ಎರಡೂ ಚೆನ್ನಾಗಿಯೇ ಆದುವು. ಈಗ ನಾವು ಚಿಂತೆಪಡಬೇಕಾದುದು ನಮಗೋಸ್ಕರವೇ!

**೧ನೆಯವನು**—ಇನ್ನು ಮುಂದೆ ರಾಜ್ಯವು ಹೀಗೆಯೇ ನಡೆದೀತೆ?

**ತ್ರಿವಿಕ್ರಮ**—ಬುಕ್ಕರಾಯನೇನೂ ಸಾಮಾನ್ಯನಲ್ಲ.

**೨ನೆಯವನು**—ಓಹೋ, ಇನ್ನು ಬುಕ್ಕರಾಯನೇನೋ ನಮಗೆ ದೊರೆ?

**ತ್ರಿವಿಕ್ರಮ**—ಮತ್ತಿನ್ನಾರಾಗಬೇಕು?

**೩ನೆಯವನು**—ಹೌದು, ಹೌದು. ಈಗ ಉಳಿದಿರುವ ರಾಜ ಸಂತತಿಯಲ್ಲಿ ಬುಕ್ಕಣ್ಣನೇ ಹಿರಿಯನಲ್ಲವೆ?

**ತ್ರಿವಿಕ್ರಮ**—ಅಷ್ಟೇ ಅಲ್ಲ. ಬುಕ್ಕಣ್ಣನವರೇ ರಾಜ್ಯವಾಳಬೇಕೆಂದು ಹರಿಹರ ಮಹಾರಾಜರೇ ನಿಷ್ಕರ್ಷೆಮಾಡಿದ್ದರು. ನಿನ್ನೆ ರಾತ್ರಿ ಅವರು ತಮಗೆ ಅವಸಾನಕಾಲವು ಸಮೀಪಿಸಿದ್ದುದನ್ನು ತಿಳಿದು, ಕೂಡಲೆ ಸಾಯಣಾಚಾರ್ಯರನ್ನು ಬಳಿಗೆ ಕರೆಯಿಸಿಕೊಂಡು, ಅವರೆದುರಿನಲ್ಲಿ ಬುಕ್ಕಣ್ಣನಿಗೆ ಹೇಳಬೇಕಾದ ಬುದ್ಧಿಮಾತುಗಳನ್ನು ಹೇಳಿ, ಆತನಿಂದಲೂ ಇತರ ತಮ್ಮಂದಿರಿಂದಲೂ ಅವರ ಮಕ್ಕಳುಗಳಿಂದಲೂ ರಾಜ್ಯವನ್ನು ಧರ್ಮದಿಂದ ಆಳುವೆವೆಂದು ಭಾಷೆ ತೆಗೆದುಕೊಂಡರು.

**೪ನೆಯವನು**—ಹಾಗೆಯೆ? ಆ ಮಹಾರಾಜನಿಗೆ ಎಷ್ಟು ದೂರದ ಯೋಚನೆ! ತನ್ನ ಪ್ರಜೆಗಳಲ್ಲಿ ಎಷ್ಟು ಮಮತೆ!

**೫ನೆಯವನು**—ಬುಕ್ಕರಾಯನು ಸ್ವಾಭಾವಿಕವಾಗಿಯೂ ಧರ್ಮಿಷ್ಟ.

**೨ನೆಯವನು**—ಧರ್ಮಿಷ್ಟನೂ ಹೌದು, ಶೂರನೂ ಹೌದು. ಅನೇಕ ಮಂದಿ ಶತ್ರುಗಳನ್ನು ಗೆದ್ದು ರಾಜ್ಯವನ್ನು ವಿಸ್ತಾರಪಡಿಸಿರುವವನು ಆತನೇ ಅಲ್ಲವೆ?

**೩ನೆಯವನು**—ಆತನು ಗುಣಶಾಲಿಯಲ್ಲದಿದ್ದರೆ ಸಾಯಣ ಗುರುಗಳೂ ವಿದ್ಯಾರಣ್ಯ ಗುರುಗಳೂ ಆತನಲ್ಲಿ ಅಭಿಮಾನವಿಡು

ತ್ತಿದ್ದರೆ? ಅವರ ಒಪ್ಪಿಗೆಯಿಂದಲೇ ಅಲ್ಲವೆ ಆತನು ಪಟ್ಟಾಧಿಕಾರಿಯಾಗಿರುವುದು?

**೧ನೆಯವನು**—ಆ ಮಹಾನುಭಾವರ ಸಹಾಯವಿದ್ದಮೇಲೆ ಬುಕ್ಕರಾಯನು ಯಶಸ್ವಿಯಾಗಿ ರಾಜ್ಯವಾಳುವನೆಂಬುದಕ್ಕೆ ತಡೆಯೇನು?

**೫ನೆಯವನು**—ಅಯ್ಯಾ, ಹೋದ ಮಹಾರಾಜನ ಮುಖವನ್ನು ನೋಡುವುದಕ್ಕಾಗಿ ಜನರೆಲ್ಲ ಹೋಗುತ್ತಿದ್ದಾರೆ. ನಾವೂ ಹೋಗಿ ಕಡೆಯ ದರ್ಶನವನ್ನು ಮಾಡಿಕೊಂಡು ಬರೋಣ.

**ಎಲ್ಲರೂ**—ಅವಶ್ಯವಾಗಿ.

[ತೆರೆ ಬೀಳುವುದು.

---

## ಭಾಗ ೪—ಫಲ

### ದೃಶ್ಯ ೧

[ಬುಕ್ಕ ಮಹಾರಾಜನೂ ಗೋಪಣ್ಣ ದಂಡನಾಥನೂ ಮಂತ್ರಾಲೋಚನಾ ಮಂದಿರದಲ್ಲಿ ಕುಳಿತು ಮಾತನಾಡುತ್ತಿರುವರು.]

**ಬುಕ್ಕ**—ಗೋಪಣಾರ್ಯರೆ, ತಾವು ತ್ವರಿತದಿಂದ ಕಲ್ಬುರ್ಗಿಗೆ ಪ್ರಯಾಣ ಬೆಳೆಸಬೇಕಾದ ಕಾರ್ಯವೊಂದಿದೆ.

**ಗೋಪಣ್ಣ**—ಸಿದ್ಧನಾಗಿರುವೆನು. ಬಹಮನಿಯ ಸುಲ್ತಾನನಿಗೆ ಜೈತ್ರಪತ್ರವನ್ನು ತೆಗೆದುಕೊಂಡು ಹೋಗುವ ಕಾರ್ಯವಷ್ಟೆ?

**ಬುಕ್ಕ**—ಅಲ್ಲ; ಮೈತ್ರೀ ಪತ್ರವನ್ನು.

**ಗೋಪಣ್ಣ**—(ಆಶ್ಚರ್ಯದಿಂದ) ಮುಹಮ್ಮದೀಯ ರಾಜನಲ್ಲಿ ಮೈತ್ರಿಯೆ?

**ಬುಕ್ಕ**—ಗುರ್ವನುಜ್ಞೆಯು ಹಾಗೆಯೇ ಇದೆ.

[ಒಬ್ಬ ಕಂಚುಕಿಯು ಪ್ರವೇಶಿಸುವನು.

**ಕಂಚುಕಿ**—ಯುವರಾಜರು ಬರುತ್ತಿರುವರು.

**ಬುಕ್ಕ**—ಒಳಕ್ಕೆ ಬರಲಿ.

[ಕಂಚುಕಿಯು ಹೋಗುವನು.

ಅವನಿಗೆ ಈ ನಿಶ್ಚಯವು ಸಮ್ಮತವಾಗದು. ಇನ್ನೂ ಹುಡುಗ; ಯುದ್ಧಮಾಡಬೇಕೆಂಬ ಉತ್ಸಾಹ ಬಲವಾಗಿದೆ.

[ಇಮ್ಮಡಿ ಹರಿಹರ ರಾಜನು ಪ್ರವೇಶಿಸುವನು.

ಬಾ, ಪುಟ್ಟಹರಿಯಣ್ಣಾ, ನಾನು ಗುರುಗಳೊಡನೆ ಆಲೋಚನೆ ಮಾಡಿಕೊಂಡು ಈಗ ತಾನೆ ಬಂದೆ.

**ಇಮ್ಮಡಿ ಹರಿಹರ**—ಗುರುಗಳು ಯುದ್ಧ ಪ್ರಯತ್ನಕ್ಕೆ ಅನುಮತಿ ಕೊಟ್ಟಿರುವರಷ್ಟೆ?

**ಬುಕ್ಕ**—ಇಲ್ಲ.

**ಇಮ್ಮಡಿ ಹರಿಹರ**—(ಆತುರದಿಂದ) ಅದೇಕೆ?

**ಬುಕ್ಕ**—ಹಿಂದೆ ನಾವು ಶೌರ್ಯವನ್ನು ತೋರಿ ಶ್ರೇಯಸ್ಸಂಪಾದನೆ ಮಾಡಬೇಕಾಗಿತ್ತು. ಈಗ ಸ್ನೇಹವೇ ಶ್ರೇಯಸ್ಕರವಾಗುವ ಕಾಲ ಬಂದಿದೆ.

**ಇಮ್ಮಡಿ ಹರಿಹರ**—ಯವನರೊಡನೆ ಸ್ನೇಹವೆ?

**ಬುಕ್ಕ**—ಹೌದು. ಅಂದು ಅವರು ಪರಕೀಯರಾಗಿದ್ದರು; ಇಂದು ಅವರು ಸ್ವಕೀಯರಾಗಿರುವರು.

**ಇಮ್ಮಡಿ ಹರಿಹರ**—ಅದು ಹೇಗೋ? . . . . ನಾನರಿಯೆ!

**ಬುಕ್ಕ**—ಆತುರಪಡಬೇಡ, ಕೇಳು; ಆಗಿನ ಯವನರು ಈ ದೇಶವನ್ನು ಹಾಳುಮಾಡಿ ಇಲ್ಲಿ ಸೂರೆಮಾಡಿದ ಸಂಪತ್ತನ್ನು ದೇಶಾಂತರಕ್ಕೆ ಸಾಗಿಸಿಕೊಂಡು ಹೋಗುತ್ತಿದ್ದರು. ಈಗಿನವರು ಇಲ್ಲಿಯೇ ನಮ್ಮವರಾಗಿ ನೆಲಸಿ ನಮ್ಮ ಸುಖದುಃಖಗಳಲ್ಲಿ ಭಾಗಿಗಳಾಗಿರುವರು. ಹಿಂದಿನವರು ಹಿಂದೂ ಧರ್ಮಕ್ಕೆ ಶತ್ರುಗಳಾಗಿದ್ದರು; ಈಗಿನವರು ಮರ್ಯಾದೆ ಮೀರದೆ ನಡೆದುಕೊಳ್ಳುತ್ತಿರುವರು. ಯಾವ ದಿವಸ ಕಲ್ಬುರ್ಗಿಯ ಸುಲ್ತಾನನು "ಹಸನ್ ಗಂಗೂ ಬಹಮನಿ" ಎಂದು ನಾಮಕರಣ ಮಾಡಿಕೊಂಡು ತನ್ನ ಪೂರ್ವ ಪಾಲಕನಾಗಿದ್ದ ಬ್ರಾಹ್ಮಣ ಗಂಗಾಧರ ಭಟ್ಟನಲ್ಲಿ ಕೃತಜ್ಞತೆಯನ್ನು ಪ್ರಕಾಶಪಡಿಸಿದನೋ, ಯಾವ ದಿನ ಆತನು ತನ್ನ ರಾಜ್ಯವನ್ನೇ "ಬಹಮನೀ" ಎಂದು ಅಂಕಿತಮಾಡಿ ಬ್ರಾಹ್ಮಣ ವಿಷಯದಲ್ಲಿ ಗೌರವವನ್ನು ಸೂಚಿಸಿದನೋ, ಎಂದು ಆತನು ಆ ಹಿಂದುವಿಗೆ ಮಂತ್ರಿ ಪದವಿಯನ್ನು ಕೊಟ್ಟು ನಮ್ಮ ಮತದವರಲ್ಲಿ ವಿಶ್ವಾಸವನ್ನು ತೋರಿದನೋ, ಆ ದಿನವೇ ಆತನು ನಮಗೂ ಎಲ್ಲ ಹಿಂದೂ ಜನರಿಗೂ ಮಿತ್ರನೂ ಮಾನ್ಯನೂ ಆದನು. ಅಂಥವನಲ್ಲಿ ನಾವು ಒಳ್ಳೆಯತನವನ್ನು ತೋರದೆ ದುಡುಕುವುದೆಂಥಾ ನೀತಿ? . . . . ನಮ್ಮ ಪರಮೋದ್ದೇಶವೇನು? ಹಿಂದೂ ಧರ್ಮದ ಕ್ಷೇಮ, ಹಿಂದೂ ಜನರ

ಅಭ್ಯುದಯ—ಇಷ್ಟೇ ಅಲ್ಲವೆ? ನಮ್ಮ ಆಶಯವು ಅನ್ಯ ಧರ್ಮನಾಶ ವಲ್ಲ, ಪರಜನ ಪೀಡೆಯಲ್ಲ. ನಮ್ಮವರಿಗೆ ಯಾವ ಬಾಧೆಯೂ ಆಗ ದಂತೆ ಮಹಮ್ಮದೀಯರು ಬಾಳುವುದಾದರೆ, ನಾವು ಏಕೆ ಅವರೊಡನೆ ಕದನವನ್ನು ಹೂಡಿ, ಲೋಕ ಸಂಕ್ಷೋಭೆಯನ್ನು ಮಾಡಿ, ಬಹು ಜನ ವಿನಾಶಕ್ಕೂ ಜನಪದ ದ್ವೇಷಕ್ಕೂ ಕಾರಣರಾಗಬೇಕು? ನಮ್ಮ ರಾಜ್ಯ ವಿಸ್ತರಣೆಯೂ ಧರ್ಮಕ್ಕೆ ವಿರುದ್ಧವಾಗದೆ ಇರಬೇಕು. ಅಲ್ಲವೆ? ಆಲೋಚಿಸಿ ನೋಡು.

**ಇಮ್ಮಡಿ ಹರಿಹರ**—ಗುರುಗಳವರು ನೀತಿ ವಿವರಣೆಯಲ್ಲಿ ಅತಿ ಚತುರರೆಂಬುದನ್ನು ಎಲ್ಲರೂ ಬಲ್ಲರು. ಆದರೆ ರಾಜ್ಯದ ಬಲಾಬಲ ಗಳನ್ನೂ ನಮ್ಮ ಪರಾಕ್ರಮದ ಮೇಲ್ಮೆಯನ್ನೂ ಅವರೇನು ಬಲ್ಲರು?

**ಬುಕ್ಕ**—ಹರಿಯಣ್ಣಾ, ಹಾಗೆನ್ನಬೇಡ; ನೀನು ಚಿಕ್ಕವನು; ಹಿಂದಿನ ಸಂಗತಿಯನ್ನು ಇನ್ನೂ ಚೆನ್ನಾಗಿ ಅರಿಯೆ. ಯಾವ ಮಹಾ ಪುರುಷನ ಹೆಸರನ್ನು ನಿನಗೆ ಕೊಡಿಸಿ, ಅದರ ಮಹಿಮೆಯಿಂದ ನೀನು ಆತನ ಹಾಗೆ ಯಶಸ್ವಿಯಾಗಿ ಬಾಳಬೇಕೆಂದು ಅವರು ಹರಸುತ್ತಿರು ವರೋ, ಆ ನಿಮ್ಮ ದೊಡ್ಡತಂದೆಯವರ ಕೈಯಿಂದ ಈ ರಾಜ್ಯವನ್ನು ಸ್ಥಾಪನೆಮಾಡಿಸಿ, ಇದನ್ನು ಇಷ್ಟು ಕಾಲವೂ ಊರ್ಜಿತಪಡಿಸಿಕೊಂಡು ಬಂದಿರುವ ನಮ್ಮ ಗುರುಗಳವರಿಗೆ ನಮ್ಮ ಬಲಾಬಲಗಳೇ ತಿಳಿಯದಿರುವು ದುಂಟೆ? ನಮ್ಮ ಶಕ್ತಿಯನ್ನು ಅವರು ಚೆನ್ನಾಗಿ ತಿಳಿದೇ ಯುದ್ಧ ಪ್ರಸಕ್ತಿ ಈಗ ಬೇಡವೆಂದು ಆದೇಶಮಾಡಿರುವರು.

**ಇಮ್ಮಡಿ ಹರಿಹರ**—ಹಾಗಾದರೆ ನಮ್ಮ ಬಲವು ಈಗ ಕುಗ್ಗಿದೆ ಯೆಂದಾಗಲಿ ನಮ್ಮ ಶೌರ್ಯವು ಈಚೆಗೆ ಕುಂದಿದೆಯೆಂದಾಗಲಿ ಅವರು ತಿಳಿದುಕೊಂಡಿರುವರೋ ಏನು?

**ಬುಕ್ಕ**—ಅವರು ಹಾಗೆ ತಿಳಿದುಕೊಂಡಿಲ್ಲ. ನಿಷ್ಕಾರಣವಾಗಿ ನುಗ್ಗುವ ಬಲವೂ ನೀತಿಯನ್ನು ವಿೂರುವ ಶೌರ್ಯವೂ ತಮ್ಮನ್ನು ತಾವೇ ಮುರಿದುಕೊಳ್ಳುವುವೆಂದು ಅವರು ತಿಳಿಯಹೇಳಿದ್ದಾರೆ.

**ಇಮ್ಮಡಿ ಹರಿಹರ**—ಅದು ಹೇಗೋ! . . . . . . . . ಅವರ ಮಾತಿಗೆ ತಲೆದೂಗುವುದು ನಿಮಗೆ ಅಭ್ಯಾಸವಾಗಿ ಹೋಗಿದೆ! ನಿಮ್ಮ ಮಾತಿಗೆ ತಲೆಬಾಗುವುದು ನಮಗೆ ಅಭ್ಯಾಸವಾಗಿ ಹೋಗಿದೆ!

**ಬುಕ್ಕ**—ಹರಿಯಪ್ಪಾ, ಸಾವಕಾಶವಾಗಿ ಆಲೋಚಿಸಿ ನೋಡು. ನಾನು ಚಿಕ್ಕವನಾಗಿದ್ದಾಗ ಅಣ್ಣಂದಿರೊಡನೆ ಈಗ ನೀನು ಮಾತ ನಾಡುವ ತೆರದಲ್ಲಿಯೇ ಆಡುತ್ತಿದ್ದೆ. ಅದು ಅನುಭವವಿಲ್ಲದ ಬಾಲ್ಯದ ರೀತಿ. ಅಧಿಕಾರ ಪ್ರತಾಪಗಳಿರುವಾಗ ನಾವು ನಮ್ಮ ಮನಸ್ಸು ತೋರುವ ದಾರಿಯೇ ಸರಿಯೆಂದು ತಿಳಿದಿರುವುದು ಸ್ವಾಭಾವಿಕ. ನಮ್ಮ ಆಶೆ, ರೋಷ, ಅಭಿಮಾನ, ಹಠ—ಇವೆಲ್ಲ ಸೇರಿ ನಮ್ಮ ಬುದ್ಧಿಯು ಅತ್ತಿತ್ತ ಹೋಗದಂತೆ ಗೋಡೆಕಟ್ಟುತ್ತವೆ. ಆ ಸೆರೆಯಲ್ಲಿ ಸಿಕ್ಕಿದ ನಮ್ಮ ದೃಷ್ಟಿಗೆ ಹೊರಗಿನ ನ್ಯಾಯಾನ್ಯಾಯಗಳೊಂದೂ ಗೋಚರಿಸದು. ನಮಗೆ ಯಾವುದು ಇಷ್ಟವೋ ಅದೇ ಧರ್ಮವೆಂದು ಸಾಧಿಸಲು ತಕ್ಕ ಕಾರಣ ಗಳನ್ನು ನಮ್ಮ ಮನಸ್ಸೇ ಕಲ್ಪಿಸಿಕೊಡುತ್ತದೆ. ಲೋಭಿಗೆ ಧನ ಸಂಪಾದನೋಪಾಯವು ಎಂಥದಾದರೂ ನ್ಯಾಯವೆಂದೇ ತೋರು ವುದು. ಹೇಡಿಗೆ ಎಂಥಾ ಸನ್ನಿವೇಶ ಬಂದರೂ ಅವಿತುಕೊಂಡಿರುವುದೇ ಯುಕ್ತವೆನಿಸುವುದು. ಬಲಿಷ್ಠನಿಗೆ ಎಂಥಾ ಕಾಲದಲ್ಲಿಯೂ ಶೌರ್ಯ ಪ್ರದರ್ಶನವೇ ಉಚಿತವೆನಿಸುವುದು. ಕಾಮ ಕ್ರೋಧಗಳ ರೀತಿಯೇ ಹೀಗೆ. ಅವುಗಳಿಗೆ ಪರವಶರಾಗದೆ, ಸ್ವತಂತ್ರರಾಗಿ, ಸಕಲ ಲೋಕದ ಕ್ಷೇಮವನ್ನೂ ದೃಷ್ಟಿಯಲ್ಲಿಟ್ಟು ನಡೆಯುವ ದೊಡ್ಡವರ ಉಪದೇಶವನ್ನು ನಾವು ಕೇಳಬೇಕು. ನಮ್ಮ ಮನಸ್ಸಿನ ಪ್ರೇರಣೆಯೊಂದನ್ನೇ ಅನುಸರಿಸಿ ನಡೆದರೆ ಅದರಿಂದ ನಮಗೂ ಇತರರಿಗೂ ಸಹ ಅನರ್ಥ ಪರಂಪರೆ ಗಳೊದಗುವುದು ನಿಶ್ಚಯ. ಈ ತತ್ತ್ವವನ್ನು ತಾಳ್ಮೆಯಿಂದ ಚಿಂತಿಸಿ ನೋಡು. (**ಗೋಪಣ್ಣನ ಕಡೆ ತಿರುಗಿ**) ದಂಡನಾಯಕರೆ, ನೀವು ನಾಳೆಯೇ ಇಲ್ಲಿಂದ ಕಲ್ಬುರ್ಗಿಗೆ ಪ್ರಯಾಣಮಾಡಿ, ನಮ್ಮ ಭಂಡಾರದಿಂದ ಒಂದು ತೋರ ಮಾಣಿಕವನ್ನು ತೆಗೆದುಕೊಂಡು ಹೋಗಿ ಸುಲ್ತಾನರಿಗೆ ಕೊಟ್ಟು, ಅದು ನಮ್ಮ ವಿಶ್ವಾಸದ ಗುರುತೆಂದೂ, ಅದು ಅವರ ಭದ್ರಾಸನದ

ವಿತಾನವನ್ನಲಂಕರಿಸಿ ನಮ್ಮ ಪರಸ್ಪರ ಸಖ್ಯವನ್ನು ಸೂಚಿಸುತ್ತಿರ ಬೇಕೆಂದೂ ಅವರಿಗೆ ಹೇಳಿಬರಬೇಕು.

**ಇಮ್ಮಡಿ ಹರಿಹರ**—ಸಖ್ಯವನ್ನು ನಾವೇ ಬೇಡುವುದೆ?

**ಬುಕ್ಕ**—ಬೇಡುವುದೆಂದಲ್ಲ. ಇದರಲ್ಲಿ ಬೇಡಿಕೆಯೇನಿದೆ? ಪ್ರಣಯ ಸಮಾರಂಭದಲ್ಲಿ ಹೇಗೆಯೋ ಸಖ್ಯ ಸಮಾರಂಭದಲ್ಲಿಯೂ ಹಾಗೆಯೇ ಪ್ರಬಲರೂ ಧೈರ್ಯಶಾಲಿಗಳೂ ಆದವರು ಮೊದಲ್ನುಡಿ ನುಡಿಯಬೇಕು. ನಾವು ಬಲಿಷ್ಠರೆಂಬುದನ್ನು ಅವರು ಬಲ್ಲರು. ಆದರಿಂದಲೇ ತಾವಾಗಿ ನಮ್ಮಲ್ಲಿಗೆ ಬರಲು ಅವರು ಹಿಂದೆಗೆಯುವರು. ನಾವು ಸ್ವಶಕ್ತಿ ಪರಶಕ್ತಿ ಗಳನ್ನರಿತವರಾದ ಕಾರಣ, ನಾವೇ ಮುಂದೆ ಹೋಗಿ ಅವರ ಶಂಕೆಯನ್ನು ಪರಿಹರಿಸಿದರೆ ಅವರಿಗೆ ನಮ್ಮಲ್ಲಿ ವಿಶ್ವಾಸವು ಸುಲಭವಾಗಿ ಹುಟ್ಟುವುದು. ಅದರಿಂದ ನಮಗೆ ಕುಂದೇನೂ ಆಗಲಾರದು. (ಗೋಪಣ್ಣನ ಕಡೆ ತಿರುಗುವನು.)

**ಗೋಪಣ್ಣ**—ಅಪ್ಪಣೆಯಾದಂತೆ ಹೋಗಿಬರುವೆನು.

[ತೆರೆ ಬೀಳುವುದು.

---

## ದೃಶ್ಯ ೨

[ಬುಕ್ಕರಾಜನ ಒಡ್ಡೋಲಗ. ಇಮ್ಮಡಿ ಹರಿಹರ ಮೊದಲಾದ ರಾಜ ಕುಮಾರರೂ, ಗೋಪಣ್ಣ ಮೊದಲಾದ ಅಧಿಕಾರಿಗಳೂ, ಶ್ರೀವೈಷ್ಣವ ಸ್ಮಾರ್ತಾದಿ ಬ್ರಾಹ್ಮಣರೂ, ಜೈನರೂ, ವೀರಶೈವರೂ ಸಭೆ ನೆರೆದಿರುವರು. ಪದ್ಮರಾಜ ಪಂಡಿತ ನೆಂಬ ಜೈನ ಪ್ರಮುಖನು ಎದ್ದುನಿಂತು ಬಿನ್ನಯಿಸುವನು.]

**ಪದ್ಮರಾಜ**—ಪ್ರಭುವೆ, ನಾವು ಜಿನಸಮಯಾವಲಂಬಿಗಳು. ನಮ್ಮ ಜನರು ಆನೆಗೊಂದಿ, ಹೊಸಪಟ್ಟಣ, ಪೆನುಗೊಂಡೆ—ಮೊದಲಾದ ಪ್ರಾಂತಗಳಲ್ಲಿ ನೆಲಸಿ ತಮ್ಮ ಪ್ರಜಾಕೋಟಿಯಲ್ಲಿ ಸೇರಿದವರಾಗಿ ಬಾಳು ತ್ತಿರುವರು. ಮಹಾಸ್ವಾಮಿಗಳವರ ಸೇವೆಯಲ್ಲಿ ಪ್ರಶಸ್ತರಾಗಿರುವ ಬೈಚಪ ದಂಡೇಶನೂ ಇರುಗಪ ದಂಡೇಶನೂ ನಮ್ಮ ಮತದವರು. ನಮ್ಮಲ್ಲಿಯೂ ಸಾಧುಗಳೂ ವಿದ್ವಾಂಸರೂ ತಪಸ್ವಿಗಳೂ ಎಷ್ಟೋ

ಮುಂದಿ ಪ್ರಸಿದ್ಧರಾದವರಿರುವರು. ಈ-ಸಾಮ್ರಾಜ್ಯದ ಕೀರ್ತಿ ವೈಭವ ಗಳಿಗಾಗಿ ಶ್ರಮಪಡುವುದರಲ್ಲಿ ಜೈನರಾದ ನಾವು ಯಾವ ಜನಾಂಗ ಕ್ಕಿಂತಲೂ ಹಿಂದೆ ಬಿದ್ದಿಲ್ಲ. ಹೀಗಿದ್ದರೂ ನಮಗೆ ವೈಷ್ಣವ ಸಮಯ ದವರಿಂದ ಈಚೆಗೆ ದುಸ್ಸಹವಾದ ಬಾಧೆಯುಂಟಾಗುತ್ತಿರುವುದು. ಅದನ್ನು ನಿವಾರಿಸಿ ನಮ್ಮನ್ನು ಕಾಪಾಡಬೇಕು, ಮಹಾಸ್ವಾಮಿ.

**ಬುಕ್ಕ**—ಈ ಮಾತು ನನಗೆ ವಿಷಾದಕರವಾಗಿದೆ. ಪದ್ಮರಾಜ ಪಂಡಿತರೆ, ಅದರ ವಿವರವೇನು?

**ಪದ್ಮರಾಜ**—ಮಹಾಪ್ರಭುವೆ, ಶುಭದಿನ ಪುಣ್ಯದಿನಗಳಲ್ಲಿ ಪಂಚ ಮಹಾವಾದ್ಯಗಳ ಸಮೇತವಾಗಿ ರಾಜವೀಧಿಗಳಲ್ಲಿ ಹೊರಟು ಪುರ ಪ್ರದಕ್ಷಿಣೆಮಾಡಿಕೊಂಡು ಕಲಶೋತ್ಸವವನ್ನು ತರುವುದು ಜೈನರ ಪುರಾತನ ಪದ್ಧತಿ. ಅದು ಕೂಡದೆಂದು ವೈಷ್ಣವರು ನಮಗೆ ಅಡ್ಡನಿಂತು, ರಾಜವೀಧಿಗಳಲ್ಲಿ ನಮ್ಮನ್ನು ಹೋಗಗೊಡಿಸದೆ ಹಿಂಸಿಸುತ್ತಿರುವರು. ಈ ಅತ್ಯಾಚಾರವನ್ನು ನಿಲ್ಲಿಸುವಂತೆ ಆಜ್ಞೆಯಾಗಬೇಕು, ಮಹಾಸ್ವಾಮಿ.

**ಬುಕ್ಕ**—ತಾತಾಚಾರ್ಯರೆ, ತಾವು ಶ್ರೀವೈಷ್ಣವರಲ್ಲಿ ಮುಖ್ಯರು. ಪದ್ಮರಾಜ ಪಂಡಿತರು ಹೇಳಿದುದನ್ನು ಕೇಳಿದಿರಷ್ಟೆ?

**ತಾತಾಚಾರ್ಯ**—ಮಹಾಪ್ರಭುವೆ, ಶ್ರೀಮನ್ನಾರಾಯಣನೇ ಪರಮದೈವವೆಂದು ವೇದ ವೇದಾಂತಗಳು ಉದ್ಘೋಷಿಸುತ್ತಿವೆ. ಮಹಾ ವಿಷ್ಣುವಿಗೆ ಸಮನೆನಿಸುವ ದೇವತೆಯು ಯಾವುದೂ ಇಲ್ಲ. ಹಾಗಿರುವಲ್ಲಿ, ವಿಷ್ಣು ಸನ್ನಿಧಿಯ ಮುಂದೆ ಅಟ್ಟಹಾಸಮಾಡಲು ಯಾರಿಗೆ ಅಧಿಕಾರ ವುಂಟು?

**ಬುಕ್ಕ**—ಆಚಾರ್ಯಸ್ವಾಮಿಗಳೆ, ವೈಷ್ಣವರಿಗೆ ವಿಷ್ಣುವು ಪರಮ ದೈವವಾದಂತೆಯೇ ಶೈವರಿಗೆ ಶಿವನು ಪರಮ ದೈವವಲ್ಲವೆ? ಜೈನರಿಗೆ ತೀರ್ಥಂಕರೇಶ್ವರರು ಪರಮ ದೈವವಲ್ಲವೆ?

**ತಾತಾಚಾರ್ಯ**—ಮಹಾಪ್ರಭುವೆ, ಇದು ವೈದಿಕ ಧರ್ಮ ವನ್ನನುಸರಿಸಿರುವ ರಾಜ್ಯ. ಮಹಾಸ್ವಾಮಿಯವರು ಶ್ರುತಿ ಸ್ಮೃತಿ

ಪುರಾಣಗಳ ಸಾರವನ್ನು ಲೋಕದಲ್ಲಿ ಪ್ರಚುರಗೊಳಿಸಿ, ವೈದಿಕಮಾರ್ಗ ಪ್ರತಿಷ್ಠಾಪಕರೆಂಬ ಬಿರುದಿನಿಂದ ವಿರಾಜಿಸುತ್ತಿರುವಾಗ, ವೇದಬಾಹ್ಯ ರಾದವರು ಈ ರಾಜ್ಯದಲ್ಲಿ ಹೆಮ್ಮೆಪಡಬಹುದೆ? ಅಲ್ಪ ಸಂಖ್ಯಾಕರಾದೀ ನಾಸ್ತಿಕರಿಗೋಸ್ಕರ ವಿಷ್ಣುಪಾರಮ್ಯವನ್ನಂಗೀಕರಿಸಿರುವ ಬಹುಮಂದಿ ಪ್ರಜೆಯು ಅವಮಾನಪಡಬೇಕೆಂಬುದಾವ ನ್ಯಾಯ?

**ಬುಕ್ಕ**—ಆಚಾರ್ಯರವರೆ, ಇಲ್ಲಿ ಮಾನಾಪಮಾನಗಳ ಪ್ರಸಂಗವು ಎಷ್ಟು ಮಾತ್ರವೂ ನನಗೆ ಕಾಣುವುದಿಲ್ಲ. ನನಗೆ ತೋರುವ ಅಭಿಪ್ರಾಯ ವನ್ನು ಹೇಳಬೇಕೆಂದಿರುವೆನು. ಲಾಲಿಸಬೇಕು.

**ತಾತಾಚಾರ್ಯ**—ಕುತೂಹಲದಿಂದ ಕೇಳುವೆವು, ಅಪ್ಪಣೆ ಯಾಗಬೇಕು.

**ಸಕಲರೂ**—ಕೃಪೆಯಿಂದ ಅಪ್ಪಣೆಯಾಗಬೇಕು.

**ಬುಕ್ಕ**—ಸಭಾಸದರೆ, ಈ ನಮ್ಮ ದೇಶದಲ್ಲಿ ಹುಟ್ಟಿದ ಜನ ವರ್ಗ ಗಳು ಪರಸ್ಪರ ಶಾತ್ರುವ ಭಾವವನ್ನು ತೊರೆದು, ಏಕೀಭವಿಸಿ, ಸುಖ ದುಃಖ ಸಮಭಾಗಿಗಳಾಗಿ ಬದುಕಬೇಕೆಂದಲ್ಲವೆ ನಮ್ಮ ಅಗ್ರಜರಾದ ಹರಿಹರೇಶ್ವರ ಮಹಾರಾಜರವರು ಈ ವಿಜಯನಗರ ಸಾಮ್ರಾಜ್ಯವನ್ನು ಪ್ರತಿಷ್ಠೆಮಾಡಿದುದು? ಇಂತಹ ನಮ್ಮ ರಾಜ್ಯದಲ್ಲಿ ನಾನಾಜಾತಿ ಗಳವರೂ ನಾನಾಮತಗಳವರೂ ವೈಷಮ್ಯಗಳನ್ನು ಬೆಳೆಯಿಸಿ ಪರಸ್ಪರ ವೈರಿಗಳಂತೆ ನಡೆದರೆ ನಮಗೆ ಅತ್ಯಂತ ವ್ಯಾಕುಲವಾಗದೆ ಹೇಗೆ ಇದ್ದೀತು? ಈ ರಾಜ್ಯದ ಅಭಿಮಾನದೇವತಾ ಸ್ವರೂಪರಾದ ನಮ್ಮ ಗುರುಗಳು ಉಪದೇಶಮಾಡಿರುವ ಒಂದೆರಡು ಶ್ಲೋಕಗಳು ಈ ಸಂದರ್ಭದಲ್ಲಿ ಸ್ಮರಣೆಗೆ ಬರುತ್ತವೆ:—

(ಶ್ಲೋ)ನಾನಾಸುಮಂಗಳಿಂ ರಾಜೋ। ದ್ಯಾನಂ ರಾಜಿಸುತಿರ್ಪವೋಲ್॥
ನಾನಾಮತಾಚಾರಗಳಿಂ। ಮಾನವೌಘಂ ವಿರಾಜಿಕುಂ ॥
ಅದರಿಂ ಜನರೆಲ್ಲರ್ ಸ। ಮ್ಮುದವಾಂತು ಪರಸ್ಪರಂ॥
ಮೃದು ವಾಗ್ವೃತ್ತಿಯಂ ತೋರ। ಲದರಿಂ ಶುಭಮೊಂದುವರ್ ॥

ಹೃದಯ ದ್ವಾರಮುಂ ವೈಶಾ।ಲ್ಯದಿ ನೀಂ ತೆರೆದಿರ್ದೊಡಾ ॥
ತ್ರಿದಿವ ದ್ವಾರಮುಂ ವೈಶಾ।ಲ್ಯದಿ ತಾಂ ತೆರೆದಿರ್ಪುದೈ ॥

ಗುರ್ವಾದೇಶವು ನಮಗೆ ಈ ರೀತಿಯಲ್ಲಿರುವುದರಿಂದ ಶ್ರುತಿ ಸ್ಮೃತಿಗಳನ್ನವಲಂಬಿಸಿರುವ ಚಾತುರ್ವರ್ಣ್ಯಗಳವರಂತೆಯೇ ಏತದ್ದೇಶೀಯಗಳಾದ ಜೈನ ಬೌದ್ಧಾದಿ ಇತರ ಧರ್ಮಗಳವರೂ, ದೇಶಾಂತರಾಗತಗಳಾದ ಮಾಹಮ್ಮದಾದಿ ವಿವಿಧ ಮತಗಳನ್ನನುಸರಿಸುವವರೂ ಸಹ ಈ ರಾಜ್ಯದಲ್ಲಿ ನಿರುಪದ್ರುವರಾಗಿ, ಸ್ವಸ್ವ ಸಂಪ್ರದಾಯಾನುವರ್ತಿಗಳಾಗಿ, ಸ್ವಧರ್ಮನಿಷ್ಠರೂ ಪರಧರ್ಮ ಸಹಿಷ್ಣುಗಳೂ ಆಗಿ, ಸೌಭ್ರಾತೃತ್ವದಿಂದ ಬದುಕಬೇಕೆಂಬುದು ನಮ್ಮ ಅಭಿಲಾಷೆ. ಸಕಲ ಮತಾಚಾರಗಳ ವಿಷಯದಲ್ಲಿಯೂ ನಮಗೆ ಏಕರೀತಿಯಾದ ಸಹನೆಯೂ ಮೈತ್ರೀಭಾವವೂ ಇರುವುವೆಂಬುದು ನಾವು ಬಹಮನಿಯ ಸುಲ್ತಾನರೊಡನೆ ಮೈತ್ರಿಯನ್ನು ಬೆಳೆಯಿಸುತ್ತಿರುವುದರಿಂದಲೇ ಎಲ್ಲರಿಗೂ ತೋರಿರಬಹುದು. ಹೀಗಿರಲಾಗಿ, ಜೈನದರ್ಶನಕ್ಕೆ ಭಕ್ತರ ದೆಸೆಯಿಂದಾದ ಹಾನಿ ವೃದ್ಧಿಗಳು ತಮ್ಮ ಹಾನಿ ವೃದ್ಧಿಗಳೆಂದೇ ವೈಷ್ಣವರು ಭಾವಿಸುವುದು ಯುಕ್ತವೆಂದು ನಮ್ಮ ಅಭಿಮತ.

**ಸಭಿಕರು**—ಅದೀಗ ಸರಿ!

ಅದು ಸಾಧು!

ಅದೇ ಉಚಿತ!

**ತಾತಾಚಾರ್ಯ**—ಪ್ರಭುಗಳವರೂ ಮಹಾಜನರೂ ಹೀಗೆ ಅಪ್ಪಣೆ ಕೊಡಿಸಿದಮೇಲೆ ನಾವು ಪ್ರತಿಹೇಳಲು ಶಕ್ತರಲ್ಲ.

**ಬುಕ್ಕ**—ಹಾಗಿದ್ದಮೇಲೆ ಇದೇ ನಮ್ಮ ಶಾಸನ: ಇನ್ನು ಮುಂದೆ ಜೈನರೂ ವೈಷ್ಣವರೂ ಒಬ್ಬರನ್ನೊಬ್ಬರು ಭೇದದಿಂದ ಕಾಣಲಾಗದು. ತಾತಾಚಾರ್ಯ ಸ್ವಾಮಿಗಳವರೆ, ಇಲ್ಲಿಗೆ ದಯೆಮಾಡಿಸುವಿರಾ?

[ತಾತಾಚಾರ್ಯರು ಹೋಗಿ ರಾಜನ ಬಳಿ ನಿಲ್ಲುವರು.

ಪದ್ಮರಾಜ ಪಂಡಿತರೆ ತಾವೂ ದಯೆಮಾಡಬೇಕು. [ಅವರೂ ಹೋಗುವರು. ವೈಷ್ಣವ ಗುರುಗಳೆ, ಜೈನ ಪ್ರಮುಖರಿಗೆ ಅಭಯಹಸ್ತವನ್ನು ದಯೆಗೆಯ್ಯಬೇಕು.

[ತಾತಾಚಾರ್ಯರು ಪದ್ಮರಾಜ ಪಂಡಿತರ ಕೈಗಳನ್ನು ಹಿಡಿದುಕೊಳ್ಳುವರು.]

**ಬುಕ್ಕ**—ಈ ಮರ್ಯಾದೆಯು ಆಚಂದ್ರಾರ್ಕಸ್ಥಾಯಿಯಾಗಿರಲಿ. ಪದ್ಮರಾಜ ಪಂಡಿತರೆ, ಇನ್ನು ಮುಂದೆ ನಮ್ಮ ಸಮಸ್ತ ರಾಜ್ಯದೊಳಗುಳ್ಳಂಥ ಜೈನರು ಮನೆ ಮನೆಗೆ ವರ್ಷಕ್ಕೆ ಒಂದು ಹಣ ಕೊಟ್ಟು, ಆ ಹೊನ್ನಿನಲ್ಲಿ ಅರ್ಧವನ್ನು ವೈಷ್ಣವದೇವರುಗಳ ಪೂಜೆಗಾಗಿ ಸಲ್ಲಿಸಿ, ಮಿಕ್ಕುದನ್ನು ಜೀರ್ಣ ಜಿನಾಲಯಗಳನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸಿಕೊಳ್ಳುವುದು.

**ಪದ್ಮರಾಜ**—ಆಜ್ಞೆಯಾದಂತೆ.

**ಬುಕ್ಕ**—ತಾತಾಚಾರ್ಯರೆ, ಇಂದು ಮೊದಲು ರಾಜ್ಯದೊಳಗುಳ್ಳಂಥ ಎಲ್ಲ ವೈಷ್ಣವರೂ ಜೈನ ದರ್ಶನವನ್ನು ಸ್ವಮತದಂತೆ ಭಾವಿಸಿ ಪರಿಪಾಲಿಸಿಕೊಂಡು ಬರತಕ್ಕವರೆಂದು ಎಲ್ಲ ಬಸ್ತಿಗಳಲ್ಲಿಯೂ ನೀವು ಶಾಸನವನ್ನು ನೆಟ್ಟು ಕೀರ್ತಿಯನ್ನೂ ಪುಣ್ಯವನ್ನೂ ಉಪಾರ್ಜಿಸಿಕೊಳ್ಳುವುದು.

**ತಾತಾಚಾರ್ಯ**—ಅಪ್ಪಣೆಯಾದಂತೆ.

**ಬುಕ್ಕ**—ಸಮಸ್ತ ರಾಜ್ಯದ ಭವ್ಯಜನಗಳ ಅನುಮತದಿಂದ ಆದ ಈ ಮರ್ಯಾದೆಯನ್ನು ಯಾರು ಮೀರುವನೋ ಅವನು ರಾಜದ್ರೋಹಿ, ಸಂಘ ಸಮುದಾಯಕ್ಕೆ ದ್ರೋಹಿ. ಅವನು ತಪಸ್ವಿಯಾಗಲಿ, ಗ್ರಾಮಣಿಯಾಗಲಿ, ಈ ಧರ್ಮವನ್ನು ಕೆಡಿಸಿದವನಾದರೆ ಗಂಗೆಯ ತಡಿಯಲ್ಲಿ ಕಪಿಲೆಯನ್ನು ಕೊಂದ ಪಾಪದಲ್ಲಿ ಹೋಗುವನು.

**ಸಭಿಕರು**—ಒಪ್ಪಿದೆವು.

ಇದೇ ಧರ್ಮ.

ಇದೇ ನ್ಯಾಯ.

**ಬುಕ್ಕ**—(ಗೋಪಣ್ಣನ ಕಡೆ ತಿರುಗಿ) ದಂಡನಾಯಕರೆ, ನೀವು ಈ ದಿನದ ನಮ್ಮ ನ್ಯಾಯ ನಿರ್ಣಯವನ್ನು ತಕ್ಕಂತೆ ಶಿಲಾಶಾಸನವಾಗಿ ಬರೆಯಿಸಿ ಶ್ರವಣಬೆಳಗೊಳ ಮೊದಲಾದ ಜೈನ ಕ್ಷೇತ್ರಗಳಲ್ಲಿಯೂ ತಿರುಪತಿ ಮೊದಲಾದ ವೈಷ್ಣವ ಕ್ಷೇತ್ರಗಳಲ್ಲಿಯೂ ಪ್ರಕಟಪಡಿಸ ತಕ್ಕದು.

**ಗೋಪಣ್ಣ**—ಆಜ್ಞೆಯಾದಂತೆ. [ತೆರೆ ಬೀಳುವುದು.

---

## ದೃಶ್ಯ ೩

[ಬುಕ್ಕ ಮಹಾರಾಜನು ಅಂತರಂಗ ಭವನದಲ್ಲಿ ಕುಳಿತಿರುವನು. ಒಂದು ಪಕ್ಕದಲ್ಲಿ ಸಾಯಣಾಚಾರ್ಯರೂ ಮತ್ತೊಂದು ಕಡೆ ಇಮ್ಮಡಿ ಹರಿಹರನೂ ಕುಳಿತಿರುವರು. ಒಬ್ಬ ಗಾಯಕನು ತಕ್ಕ ಹಿಮ್ಮೇಳದೊಡನೆ ಹಾಡುತ್ತಿರುವನು.]

**ಗಾಯಕ**—(ಹಾಡುವನು : ಶ್ರೀರಾಗ)

ಮೌನಿವರ್ಯನೇ ಧನ್ಯನು—ಲೋಕೈಕ ಮೂರ್ಧನ್ಯನು ‖ ಪ. ‖
ಚಿಂತೆಯಂ ಕಳೆದು ಶಾಂತಿಯೊಂದಿ ಜಗ-
ದಂತರಾತ್ಮನೊಳು ಸಂತಸಂ ಬಡುವ ‖ ಅ. ಪ. ‖
ಶಮ ದಮ ನಯ ದಯಾತಿಶಯಂಗಳಿಂ ನಲಿವ—ಆ ‖ ೧ ‖
ಪಾವನ ಚಿದ್ಘನರೂಪನ ವೈಭವವೀ ಭುವನವೆಂಬ ‖ ೨ ‖
ತನ್ನದು ನಿನ್ನದು ಎನ್ನಿಪ ಭಿನ್ನತೆಯಂ ಜರೆದು ಬಾಳ್ವ ‖ ೩ ‖
ಮೂಜಗದೊಳಗೆ ನಿಜಾತ್ಮವಸ್ತುವಿನ ತೇಜವನೊಂದನೆ ಕಾಣುತಲಿ।
ಗಂಧವಾಹನಂತೆಲ್ಲರಿಗುಂ ಸಮಬಂಧುವಾಗಿ ಶುಭಗಂಧವ ಪಸರಿಪ ‖ ೪ ‖
ಆಶೆಯಂ ತೊರೆದು ಮೋಹಮಂ ಪರಿದು ರೋಷಮಂ ತರಿದು ಹರುಷಿ
ಸುತಾ।
ನವವಸಂತ ಸುಮದಂತೆ ಸಕಲಜನಸಂತತಿಯನು ಸಂತಯಿಸುತೆ ಚರಿಸುವ

ನಿರುಪಮಧೀರಂ ಪರಮೋದಾರಂ ವಿಗಳಿತವೈರಂ ಧೃವಸುಖಸಾರಂ।
ದುರಿತವಿದೂರಂ ಹೃತಭವಭಾರಂ ನಿರವಧಿ ಕರುಣಾ ಪಾರಾವಾರಂ ॥ ೬ ॥

**ಬುಕ್ಕ**—(ಗಾಯಕನನ್ನು ಕುರಿತು) ವಿದ್ವಾಂಸರೆ, ಈ ಕೀರ್ತನೆಯನ್ನು ರಚಿಸಿದವರಾರು ?

**ಗಾಯಕ**—ಪ್ರಭುವೆ, ಅಷ್ಟಭಾಷಾಕವಿ ಸೋಮಣ್ಣನವರು.

**ಬುಕ್ಕ**—ವಿದ್ವಾಂಸರೆ, ನಿಮ್ಮ ಈ ದಿನದ ಗಾಯನದಿಂದ ಆಗಿರುವ ಸಂತೋಷವು ಅಷ್ಟಿಷ್ಟಲ್ಲ. ಈ ಪಾರಿತೋಷಕವನ್ನು ಸ್ವೀಕರಿಸಬೇಕು.

[ಮುಂದಿದ್ದ ತಟ್ಟೆಯಿಂದ ಒಂದು ಮುತ್ತಿನಹಾರವನ್ನು ತೆಗೆದುಕೊಡುವನು.]

**ಗಾಯಕ**—ನನ್ನ ಹಾಡಿಕೆಯೆಲ್ಲವೂ ಮಹಾಪ್ರಭುವಿನ ಧರ್ಮ ಪ್ರಭಾವ. [ಹಾರವನ್ನು ತೆಗೆದುಕೊಳ್ಳುವನು.

**ಬುಕ್ಕ**—ವಿದ್ವಾಂಸರೆ, ಮತ್ತೊಂದು ವೇಳೆ ನೀವು ಬಂದು ಇಂತಹ ಹಾಡುಗಳನ್ನು ಹಾಡಿ ಸಂತೋಷಪಡಿಸಬೇಕು.

**ಗಾಯಕ**—ಮಹಾಸ್ವಾಮಿಯ ಸೇವೆಗೆ ಸರ್ವದಾ ಸಿದ್ಧನಾಗಿರುವೆನು. ಅಪ್ಪಣೆಯಾದರೆ ಈಗ ಹೋಗಿ ಬರುವೆನು. [ನಮಸ್ಕರಿಸಿ ಹೋಗುವನು.

**ಬುಕ್ಕ**—(ಸಾಯಣಾಚಾರ್ಯರನ್ನು ಕುರಿತು) ಗುರುಗಳವರೆ, ದೊಡ್ಡ ಗುರುಗಳವರ ಸಾನ್ನಿಧ್ಯದ ಸುಖವನ್ನನುಭವಿಸಿ ಬಹುಕಾಲವಾಯಿತು. ಈ ಕೊರತೆಯು ನನ್ನನ್ನು ಯಾವಾಗಲೂ ಬಿಟ್ಟಿರುವುದಿಲ್ಲ. ಇಂತಹ ಕೀರ್ತನೆಯನ್ನು ಕೇಳಿದಮೇಲಂತೂ ಮನಸ್ಸು ಅವರನ್ನು ಬಿಟ್ಟು ಒಂದು ಕ್ಷಣವೂ ಬೇರೊಂದು ಕಡೆ ತಿರುಗಲೊಲ್ಲದು. ....(ಒಬ್ಬ ಕಂಚುಕಿಯು ಪ್ರವೇಶಿಸಿ ನಿಲ್ಲುವನು. ಅವನ ಕಡೆ ತಿರುಗಿ) ಏನದು ?

**ಕಂಚುಕಿ**—ಮಧುರೆಯಿಂದ ಒಬ್ಬ ದೂತನು ಶುಭವಾರ್ತೆಯನ್ನು ತಂದಿದ್ದಾನೆ.

**ಬುಕ್ಕ**—ಅವನೇ ಇಲ್ಲಿ ಬರಲಿ.

[ಕಂಚುಕಿಯು ಹೋಗುವನು. ದೂತನು ಪ್ರವೇಶಿಸುವನು.

**ದೂತ**—(ಬಗ್ಗಿ ನಮಸ್ಕರಿಸಿ) ಪ್ರಭುವೆ, ಕುಮಾರ ಕಂಪರಾಜರು ಮಧುರೆಯ ಸುಲ್ತಾನನನ್ನು ಓಡಿಸಿ, ಕೋಟೆಯನ್ನು ವಶಮಾಡಿಕೊಂಡು, ಮುಂದೆ ರಾಮಸೇತು ದರ್ಶನಕ್ಕಾಗಿ ಬಿಜಯಂಗೈದಿರುವರು. ಈ ಸಂತೋಷವಾರ್ತೆಯನ್ನು ಸನ್ನಿಧಾನದಲ್ಲಿ ಅರಿಕೆಮಾಡಬೇಕೆಂದು ನನ್ನನ್ನು ಕಳುಹಿಸಿದ್ದಾರೆ.

**ಬುಕ್ಕ**—ಬಹು ಸಂತೋಷ. ಅಲ್ಲಿನ ಯುದ್ಧವೆಷ್ಟು ದಿನ ನಡೆಯಿತು?

**ದೂತ**—ಎಂಟು ದಿನ ಬಹು ಘೋರವಾದ ಯುದ್ಧವಾಯಿತು. ಆದರೂ ನಮ್ಮ ಕಡೆ ಹೆಚ್ಚು ಮಂದಿ ನಷ್ಟವಾಗಲಿಲ್ಲ. ಆ ಪ್ರಾಂತ ಎಲ್ಲಿ ಹೋದರೂ ಜನರು ನಮ್ಮವರನ್ನು ಸ್ನೇಹದಿಂದಲೇ ಕಾಣುತ್ತಿರುವರು.

**ಬುಕ್ಕ**—ನಮ್ಮವರೂ ಸ್ನೇಹದಿಂದ ನಡೆಯುತ್ತಿರುವರಷ್ಟೆ?

**ದೂತ**—ನಮ್ಮಲ್ಲಿ ಯಾರೂ ಮರ್ಯಾದೆಯನ್ನು ಮೀರಿ ನಡೆದಿಲ್ಲ. ಆದುದರಿಂದಲೇ ಪಾಂಡ್ಯ ರಾಜ್ಯದಲ್ಲಿಯೂ ಸುಲ್ತಾನನ ರಾಜ್ಯದಲ್ಲಿಯೂ ಇರುವ ಗಡಿದುರ್ಗಗಳು ಸುಲಭವಾಗಿ ನಮ್ಮ ಕೈಸೇರಿ ನಿಂತಿವೆ.

**ಬುಕ್ಕ**—ಅಲ್ಲೆಲ್ಲಾ ನೆಲಸಿರುವುದಕ್ಕೆ ಸಮರ್ಥರಾದ ದಂಡನಾಯಕರನ್ನು ನಿಯಮಿಸಿರುವರೋ?

**ದೂತ**—ಕುಮಾರ ರಾಜರು ತಾವೇ ದುರ್ಗಾಧಿಕಾರಿಗಳನ್ನು ಗೊತ್ತುಮಾಡಿ ಅಲ್ಲಲ್ಲಿ ನಿಲ್ಲಿಸಿ, ಅವರಿಗೆ ಬೇಕಾದ ಸಹಾಯ ಸಾಮಗ್ರಿಗಳನ್ನು ಕೊಟ್ಟಿರುವರು. ಎಲ್ಲೆಲ್ಲಿಯೂ ಜನರು ಸಮಾಧಾನದಿಂದ ಇರುವರು. ಗೊಂದಲವೇಳುವ ಭಯವೆಲ್ಲಿಯೂ ತೋರುವುದಿಲ್ಲ.

**ಬುಕ್ಕ**—ಹಾಗಿದ್ದರೆ ಸರಿ. (**ಇಮ್ಮಡಿ ಹರಿಹರನ ಕಡೆ ತಿರುಗಿ**) ಮಗು ಹರಿಯಣ್ಣಾ, ನೀನು ಹೋಗಿ ಇವನು ತಂದಿರುವ ವಾರ್ತೆಯ ವಿವರಗಳನ್ನು ತಿಳಿದುಕೊಂಡು, ಅಲ್ಲಿ ನಿನ್ನ ತಮ್ಮನಿಗೆ ಬೇಕಾಗುವ ಸೇನಾ ಸಾಮಗ್ರಿಗಳನ್ನು ಈ ದಿನವೇ ಕಳುಹಿಸಿಕೊಡುವ ಹಾಗೆ ಮಾಡು.

ಇಲ್ಲಿಯ ನಮ್ಮ ಕ್ಷೇಮಲಾಭಗಳನ್ನು ತಿಳುಹಿಸುವ ಪತ್ರವನ್ನೂ ಕಂಪಣ್ಣ ನಿಗೆ ಬರೆಯಿಸಿ ಕಳುಹಿಸು.

**ಇಮ್ಮಡಿ ಹರಿಹರ**—ಹಾಗೆಯೇ ಸರಿ.

[ಇಮ್ಮಡಿ ಹರಿಹರನೂ ದೂತನೂ ಹೋಗುವರು.

**ಬುಕ್ಕ**—ಗುರುಗಳವರೆ, ನನ್ನ ಮನಸ್ಸಿನ ಒಂದು ಕಳವಳವನ್ನು ಹೇಳಿಕೊಳ್ಳಬೇಕೆಂದು ತಮ್ಮನ್ನು ಈಗ ಬರಮಾಡಿಕೊಂಡೆ. ನನ್ನ ಅಂತ ರಂಗವನ್ನು ತಮ್ಮಲ್ಲಲ್ಲದೆ ಇನ್ನಾರಲ್ಲಿ ಹೇಳಿಕೊಳ್ಳಲಿ?

**ಸಾಯಣ**—ಬುಕ್ಕಣ್ಣಾ, ಇದೇನು, ಹೀಗೆ ಹೇಳುವೆ? ನಾನಿರು ವುದು ನಿನ್ನ ಕಳವಳವನ್ನು ಪರಿಹರಿಸುವುದಕ್ಕಲ್ಲದಿದ್ದರೆ ಇನ್ನಾವುದ ಕ್ಕೋಸ್ಕರ? ಎಂದಿನಂತೆ ನಿಶ್ಶಂಕೆಯಿಂದ ಮಾತನಾಡು.

**ಬುಕ್ಕ**—ನೋಡಿ, ಗುರುಗಳೆ, ವೇದಗಳ ಅರ್ಥವನ್ನು ತಾವು ನನಗೋಸ್ಕರ ವಿವರಿಸಿ ಹೇಳಿರುವಿರಿ. ಸ್ಮೃತಿಗಳ ಮರ್ಮಗಳನ್ನೂ ಪುರಾಣಗಳ ಸಾರವನ್ನೂ ವಿವರಿಸಿರುವಿರಿ. ಆದರೂ ನನ್ನ ಮನಸ್ಸೇಕೋ ಇನ್ನೂ ಸಮಾಧಾನವನ್ನು ಪಡೆಯಲಾರದೆ ಇದೆ. ಸಂಪತ್ತಿನಲ್ಲಿಯೂ ಐಶ್ವರ್ಯದಲ್ಲಿಯೂ ನಿಮ್ಮ ಆಶೀರ್ವಾದದಿಂದ ಈಗ ನನಗೆ ಯಾವ ಕೊರ ತೆಯೂ ಇಲ್ಲ. ನಮ್ಮ ರಾಜ್ಯವು ಬೇಕಾದಷ್ಟು ವಿಸ್ತೃತವಾಗಿದೆ. ನಮ್ಮ ದಂಡನಾಯಕರು ಸಮುದ್ರದವರೆಗೂ ಜಯಸ್ತಂಭಗಳನ್ನು ನೆಟ್ಟಿದಾರೆ. ನಮ್ಮ ನಾಡಿನ ಗೌಡ ಪ್ರಜೆಗಳು ಸಂಪತ್ಸಮೃದ್ಧಿಯಿಂದ ನೆಮ್ಮದಿ ಯಾಗಿರುವರು. ನಮ್ಮ ರಾಜಧಾನಿಯು ನಾನಾದೇಶಗಳ ವರ್ತಕರನ್ನೂ ವಿದ್ವಾಂಸರನ್ನೂ ಆಕರ್ಷಿಸಿಕೊಂಡು ಬೆಳೆಯುತ್ತಿದೆ. ಸಾಮಾನ್ಯವಾಗಿ ರಾಜರಿಗಿರುವ ಆಶೆಗಳೆಲ್ಲವನ್ನೂ ವಿರೂಪಾಕ್ಷೇಶ್ವರನು ಪೂರಯಿಸಿ ಕೊಟ್ಟಿರುವನು. ಇನ್ನು ನನಗೆ ರಾಜ್ಯಾಕಾಂಕ್ಷೆಯಿಲ್ಲ, ಜಯಾಕಾಂಕ್ಷೆ ಯಿಲ್ಲ, ಧನಾಕಾಂಕ್ಷೆಯಿಲ್ಲ, ಸ್ತೋತ್ರಾಕಾಂಕ್ಷೆಯೂ ಇಲ್ಲ. ಇವೆಲ್ಲ ವನ್ನೂ ಬೇಕಾದಷ್ಟು ಅನುಭವಿಸಿದ್ದೇನೆ. ಆದರೆ ಮನಸ್ಸಿಗೆ ಮಾತ್ರ ಈಚೆಗೆ ಏನೋ ಅತೃಪ್ತಿ,—ಏನೋ ಅಸಂತುಷ್ಟಿ. ಅದೇನೆಂದು ಹೇಳಲು

ತಿಳಿಯದು. ಏನೋ ಒಂದು ಕೊರತೆಯಿದೆ ಎಂದು ಮಾತ್ರ ಮನಸ್ಸು ಹೇಳುತ್ತಿದೆ. ಹಿಂದೆ ಶತ್ರುಗಳನ್ನು ಗೆದ್ದೆವೆಂದು ವರ್ತಮಾನ ಬಂದರೆ ಆಗುತ್ತಿದ್ದ ಸಂತೋಷವು ಈಚೆಗೆ ಆಗುವುದಿಲ್ಲ. ಇದರ ಕಾರಣವೇನೋ ತಿಳಿಯಲಾರೆ.

**ಸಾಯಣ**—ಬುಕ್ಕಣ್ಣಾ, ನಮ್ಮ ಇಹಲೋಕದ ಸಂತೋಷಗಳ ಸ್ವಾರಸ್ಯವೇ ಇಷ್ಟು. ನಾವು ನಮ್ಮ ಹೊರಗಡೆ ಸುಖವನ್ನು ಹುಡುಕುತ್ತ ಹೋಗುತ್ತೇವೆ. ಅಲ್ಲಿರುವ ಸುಖಕ್ಕೆ ಮಿತಿಯುಂಟು. ಇಂದೋ, ಇನ್ನು ಹತ್ತು ವರ್ಷಕ್ಕೋ, ಮತ್ತಾವಾಗಲೋ ಒಂದು ದಿನ ಅದು ಮುಗಿಯುವುದು ತಪ್ಪದು. ಆ ಬಳಿಕ ನಮಗೆ ಬಾಹ್ಯ ಪ್ರಪಂಚವು ಬೇಡವೆನ್ನಿಸುತ್ತದೆ. ಎಂದಿಗೂ ಮುಗಿಯದ ಸೌಖ್ಯವನ್ನು ಬಯಸುವವನು ತನ್ನೊಳಗೇ ಹುಡುಕಬೇಕು. ಆದರೆ ಬಹಿರಂಗದ ಭೋಗಗಳನ್ನು ಹುಡುಕಾಡಿ ದಣಿಯುವುದಕ್ಕೆ ಮುಂಚೆ ಮನಸ್ಸು ಅಂತರಂಗಕ್ಕೆ ತಿರುಗಲೊಲ್ಲದು. ಈಗ ನೀನು ಬಾಹ್ಯಲೋಕದಲ್ಲಿ ದೊರೆಯಬಹುದಾದೆಲ್ಲವನ್ನೂ ಅನುಭವಿಸಿರುವೆ. ವೇದಶಾಸ್ತ್ರ ಶ್ರವಣಮಾಡಿರುವುದರಿಂದ ನಿನ್ನ ಬುದ್ಧಿಯು ಹೊರಗಿನ ಪ್ರಪಂಚಕ್ಕೇ ಪುನಃಪುನಃ ಇನ್ನೂ ತಿರುಗದೆ, ಈಗ ಬೇರೊಂದು ಕಡೆಗೆ ತಿರುಗುತ್ತಿದೆ. ಇದೇ ಉತ್ತಮ ಸಂಸ್ಕಾರವನ್ನು ಪಡೆದವನ ಲಕ್ಷಣ. ಮನುಷ್ಯನಿಗೆ ಎಂದು ಹೊರಗಣ ಸೌಖ್ಯಲಾಭಗಳಲ್ಲಿ ಪ್ರವೃತ್ತಿಯಿಲ್ಲದೇ ಹೋಗುವುದೋ ಅಂದು ಅವನು ತನ್ನೊಳಗಿರುವ ಸಂಪತ್ತನ್ನು ಕಾಣಲು ಅರ್ಹನಾಗುವನು. ಈ ಅಂತಸ್ಸಂಪತ್ತಿಗೆ ಮಿತಿಯೆಂದಿಗೂ ಬಾರದು. ಅದನ್ನು ಕೈವಶ ಮಾಡಿಕೊಂಡವನಿಗೆ ಇಹಲೋಕದ ವ್ಯಾಪಾರಗಳು ಭಾರವೆನಿಸವು. ಮನುಷ್ಯನ ಕರಣಗಳನ್ನು ಅವನ ಸುತ್ತುಮುತ್ತಲಿನ ಜಗತ್ತು ಯಾವಾಗಲೂ ಕೆಣಕುತ್ತಿರುವುದಲ್ಲವೆ? ಅದರಿಂದ ಉದ್ರೇಕಗೊಂಡ ಆ ಕರಣಗಳು ಮರಳಿ ಅದೇ ಜಗತ್ತನ್ನೇ ಕೆಣಕುವುವು. ಈ ರೀತಿ ನಡೆಯುತ್ತಿರುವ ಸಂಕ್ಷೋಭೆ ಪ್ರತಿಸಂಕ್ಷೋಭೆಗಳೇ ನಮ್ಮ ಸಾಮಾನ್ಯ ವ್ಯಾಪಾರ. ಯಾವನಾದರೆ ಬಹಿಃಪ್ರಪಂಚವು ತನ್ನ ಅಂತಃಕರಣಗಳನ್ನು ಉದ್ರೇಕಗೊಳಿಸಲಾಗದಂತೆಯೂ, ಅದಕ್ಕೆ ಪ್ರತಿಯಾಗಿ ಬಹಿಃಪ್ರಪಂಚದ

ಉದ್ರೇಕವನ್ನು ಶಮನಗೊಳಿಸುವುದಕ್ಕೇ ತನ್ನ ಅಂತಃಕರಣಗಳು ಪ್ರವೃತ್ತವಾಗುವಂತೆಯೂ ಮನಸ್ಸನ್ನು ತಿದ್ದಿಕೊಂಡಿರುವನೋ ಆತನೇ ಯೋಗಿ, ಆತನೇ ಧರ್ಮರಹಸ್ಯವನ್ನರಿತವನು—

(ಕಂದ) ಜಗದಿಂ ತನಗಂ ತನ್ನಿಂ।
ಜಗಕಂ ದುಮ್ಮಾನ ಮೊದವದಂದದಿ ಪುರುಷಂ ॥
ನೆಗಳ್ಚುತಿರೆ ಸಾಮರಸ್ಯವ।
ಮಿಗೆ ಬಹಿರಂತರಗಳೊಳ್ ಮಹಾಕೃತಿಯಾತಂ ॥

ಅಂತಹ ಧನ್ಯನು ಈ ಲೋಕದಿಂದ ಯಾವುದನ್ನೂ ಬಯಸನು. ಯಾವುದಕ್ಕಾಗಿಯೂ ಬೇಸರಗೊಳ್ಳನು; ಲೋಕದಲ್ಲಿ ಮಮತೆಯಿಲ್ಲದೆ ಇರುವನು, ಆದರೂ ಲೋಕಾನುಗ್ರಹವನ್ನು ತೋರುತ್ತಲೇ ಇರುವನು, ದುಷ್ಕರವೆಂದು ತೋರುವ ಈ ವೃತ್ತಿಯು ತತ್ತ್ವಜ್ಞಾನದಿಂದ ಸುಕರ ವಾಗುವುದು. ಈ ರಹಸ್ಯವನ್ನೇ ಹಿಂದೆ ಹರಿಹರ ಮಹಾರಾಜನ ಮನಸ್ಸು ವ್ಯಾಕುಲವಾಗಿದ್ದ ಕಾಲದಲ್ಲಿ ಗುರುಗಳವರು ಆತನಿಗೆ ಉಪದೇಶಮಾಡಿದರು.

**ಬುಕ್ಕ**—ಗುರುಗಳವರೆ, ನನ್ನ ಮನಸ್ಸು ಹೀಗೆ ಸಮಾಧಾನ ವಿಲ್ಲದೆ ಸಂಕಟಕ್ಕೆ ಸಿಕ್ಕಿರುವ ಸಮಯದಲ್ಲಿ ಆ ಮಹಾನುಭಾವರು ನನ್ನನ್ನು ಬಿಟ್ಟು ದೂರದೇಶಗಳಲ್ಲಿ ಸಂಚರಿಸುತ್ತಿರುವುದು ನನ್ನ ದುಷ್ಕೃತದ ಫಲವೇ ಆಗಿರಬೇಕಲ್ಲವೆ? ಅವರೇನು ನನ್ನನ್ನು ಮರೆತಿರು ವರೆ? ನನ್ನಲ್ಲಿ ಉದಾಸೀನರಾಗಿರುವರೆ? . . . . . . ಹಾಗೂ ತಿಳಿಯ ಲಾರೆ. ಅವರ ಮಮತೆಗೆ ನಾನು ಅರ್ಹನಾಗದಿದ್ದರೂ ಈ ರಾಜ್ಯದ ಮೇಲಿನ ಅಭಿಮಾನದಿಂದಲೂ ಅಣ್ಣನವರ ಮೇಲಿನ ಪ್ರೀತಿಯಿಂದಲೂ ನನ್ನಲ್ಲಿ ಅವರು ಅನುಗ್ರಹ ತೋರಬೇಡವೆ?

**ಸಾಯಣ**—ಬುಕ್ಕಣ್ಣಾ, ಹಾಗೆ ತಿಳಿಯಬೇಡ. ನೀನು ಧರ್ಮ ಶೀಲನೆಂದು ಅವರು ಚೆನ್ನಾಗಿ ತಿಳಿದುಕೊಂಡಿದ್ದಾರೆ. ಅವರ ಅನು ಗ್ರಹವು ನಿನ್ನಲ್ಲಿ ಸಂಪೂರ್ಣವಾಗಿದೆ. ಕಾರ್ಯಮಹತ್ತ್ವದಿಂದ ಅವರು ಹಿಂದಿರುಗದೆ ಇರಬಹುದು; ಅನ್ಯಥಾ ಅಲ್ಲ.

**ಬುಕ್ಕ**—ಅವರ ಸಾನ್ನಿಧ್ಯದಲ್ಲಿರಬೇಕೆಂಬ ಅಭಿಲಾಷೆಯು ಈಗ ನನಗೆ ಬಲವತ್ತರವಾಗಿದೆ. ರಾಜ್ಯಭಾರವನ್ನು ಮಗು ಹರಿಯಣ್ಣನಿಗೊಪ್ಪಿಸಿ ಅವರಿರುವ ಸ್ಥಳಕ್ಕೆ ನಾನೇ ಹೋಗಬೇಕೆಂದು ಎಣ್ಣಿಸುತ್ತದೆ.

**ಸಾಯಣ**—ಹಾಗೆ ಮಾಡತಕ್ಕುದಲ್ಲ. ಹರಿಯಣ್ಣನು ಪ್ರತಾಪಶಾಲಿಯೇನೋ ಹೌದು; ಆದರೆ ಇನ್ನೂ ಬಾಲಕ, ಲೋಕಾನುಭವವಿಲ್ಲದವನು. ನೀನಿಲ್ಲಿರುವಾಗ ನಿರಪಾಯವಾಗಿರುವ ರಾಜ್ಯವು ನೀನು ದೇಶಾಂತರಕ್ಕೆ ಹೋದಾಗಲೂ ನಿರುಪಾಧಿಕವಾಗಿಯೇ ಇರುವುದೆಂದು ಹೇಗೆ ನಂಬಬಹುದು? ಭೋಗ ಬುದ್ಧಿಯಿಂದಲ್ಲದಿದ್ದರೆ ಕರ್ತವ್ಯ ಬುದ್ಧಿಯಿಂದಲಾದರೂ ನಿನ್ನ ರಾಜ್ಯವನ್ನು ನೀನು ಪಾಲಿಸಿಯೇ ತೀರಬೇಕು. ನೀನು ಈಗ ಕೃತಕೃತ್ಯನೆಂದು ತಿಳಿದುಕೊಳ್ಳಲಾಗದು.

**ಬುಕ್ಕ**—ಹಾಗಾದರೆ ಈ ಮನಸ್ಸಿನ ವ್ಯಾಕುಲವು ಹೋಗುವ ಬಗೆ ಹೇಗೆ? ದೊಡ್ಡ ಗುರುಗಳ ದರ್ಶನವಾಗುವುದಾವಾಗ?

**ಸಾಯಣ**—ಅವರು ದೇಶ ಸಂಚಾರ ಮಾಡುತ್ತಿರುವುದೂ ಲೋಕದ ಕ್ಷೇಮವನ್ನು ಸಾಧಿಸುವುದಕ್ಕೋಸ್ಕರವೇ. ಈ ರಾಜ್ಯ ಸಂಸ್ಥಾಪನೆಯೊಂದರಿಂದಲೇ ಅವರ ಕೆಲಸ ಮುಗಿಯಲಿಲ್ಲ. ಯಾವ ಧರ್ಮಕ್ಕೆ ಅಂಗರಕ್ಷಕನಂತೆ ಇರಬೇಕೆಂದು ಈ ರಾಜ್ಯವನ್ನು ಅವರು ಹರಿಹರಮಹಾರಾಜನಿಂದ ಸ್ಥಾಪನೆ ಮಾಡಿಸಿದರೋ ಆ ಧರ್ಮಕ್ಕೆ ಅಂಗಾಂಗಪ್ರಾಯವಾಗಿರುವ ಮಠಗಳನ್ನು ಅಲ್ಲಲ್ಲಿ ಸ್ಥಾಪಿಸಿ, ಪ್ರಾಚೀನ ಮಠಗಳನ್ನು ಜೀರ್ಣೋದ್ಧಾರಮಾಡುವುದಕ್ಕಾಗಿ ಅವರು ಹೊರಟಿರುವರು. ದಕ್ಷಿಣ ದೇಶದಲ್ಲಿರುವ ಧರ್ಮಪೀಠಗಳು ನಿಮ್ಮ ಆದರಣೆಯಿಂದಲೂ ರಕ್ಷಣೆಯಿಂದಲೂ ಈಗ ಬೆಳೆಯುತ್ತಿವೆ. ಉತ್ತರ ದೇಶದ ಮಠಗಳಿಗೆ ಇನ್ನೂ ಅನ್ಯಮತೀಯರ ಭೀತಿ ತಪ್ಪಿಲ್ಲ. ಅವುಗಳಿಗೆ ಸಹಾಯವನ್ನೊದಗಿಸಿ ವೇದಮತವು ಪುನರುಜ್ಜೀವನಗೊಳ್ಳುವಂತೆ ಮಾಡುವ ಕಾರ್ಯವು ಇನ್ನೂ ಉಳಿದಿದೆ. ಅದು ನೆರವೇರಿದೊಡನೆಯೆ ಅವರು ಹಿಂದಿರುಗಿ ಬಂದಾರು.

**ಬುಕ್ಕ**—ಅವರ ಮಹಿಮೆಯು ಅದ್ಭುತವಾದುದು. ಅವರು ಹಿಡಿದ ಕೆಲಸವಾವುದಾದರೂ ನಡೆಯಲೇ ಬೇಕು. ಆದರೆ ಅವರಿಗೆ ನನ್ನ ಅಪೇಕ್ಷೆಯೇನು? ಯಾರ ಅಪೇಕ್ಷೆ ತಾನೆ ಏನು? ಜಗತ್ತೆಲ್ಲವೂ ಅವರದೇ. ಯಾವುದೂ ಅವರದಲ್ಲ. ಅಂತಹವರು ನನ್ನನ್ನುದ್ದೇಶಿಸಿ ಬಂದಾರೆ? ಅವರು ಇಲ್ಲಿಲ್ಲವೆಂಬ ಸಂಕಟವನ್ನು ಅನುಭವಿಸತಕ್ಕವನು ನಾನು. ಆದಕಾರಣ ನಾನೇ ಅವರನ್ನು ಹುಡುಕಿಕೊಂಡು ಹೋಗುವುದು ಉಚಿತವಲ್ಲವೆ?

**ಸಾಯಣ**—ಬುಕ್ಕಣ್ಣಾ, ನಿನ್ನ ಗುರು ಭಕ್ತಿಯು ಪೂರ್ಣದಶೆಯನ್ನು ಪಡೆದಿದೆ; ನೀನೇ ಪುಣ್ಯಶಾಲಿ. ನೀನು ಈಗ ಶೃಂಗಗಿರಿಗೆ ಪ್ರಯಾಣಬೆಳೆಸಿ, ವೃದ್ಧರಾದ ಭಾರತೀತೀರ್ಥ ಗುರುಗಳವರನ್ನು ಸೇವಿಸಿ, ಅವರಿಂದ ವಿದ್ಯಾರಣ್ಯ ಗುರುಗಳವರಿಗೆ ಒಂದು ಪತ್ರವನ್ನು ಬರೆಯಿಸಿ ಕಳುಹಿಸು. ಅವರಿಗೆ ಸಹಾಯವಾಗಿರುವುದಕ್ಕೂ, ಅವರಿಂದ ಜ್ಞಾನಾಮೃತವನ್ನು ಪಡೆಯುವುದಕ್ಕೂ ನೂರಾರು ಮಂದಿ ಯತಿಗಳು ಅವರೊಡನೆ ಸಂಚರಿಸುತ್ತಿರುವರು. ಹಿರಿಯ ಗುರುಗಳ ನಿರೂಪವನ್ನು ನೋಡಿದೊಡನೆಯೆ ಅವರು ಹಿಂದಿರುಗುವರು.

**ಬುಕ್ಕ**—ಸಾಯಣ ಗುರುಗಳೆ, ಒಳ್ಳೆಯ ಯೋಚನೆ ಹೇಳಿದಿರಿ. ನಾಳೆ ಬೆಳಗಾಗುತ್ತಲೇ ಶೃಂಗಗಿರಿಗೆ ಹೊರಡುವೆನು. ಅಲ್ಲಿ ಪರಮ ಗುರುಗಳಿಗೆ ನನ್ನ ಕಾಣಿಕೆಯನ್ನು ಸಲ್ಲಿಸಬೇಕೆಂಬ ಆಶೆ ಬಹುದಿನಗಳಿಂದ ಇದೆ. ಈಗ ಎರಡು ಆಶೆಗಳೂ ನೆರವೇರುವಂತಾಯಿತು. ವಿದ್ಯಾರಣ್ಯ ಗುರುಗಳು ಸಶಿಷ್ಯರಾಗಿ ಬಂದು ದರ್ಶನಕೊಟ್ಟ ದಿನ ನನ್ನ ಜೀವಿತವು ಸಫಲವಾಗುವುದು. ಆ ಮಹಾತ್ಮರಿಗೂ ಆ ಸಾಧುಗಳಿಗೂ ಸೇವೆ ಮಾಡುವ ಸಂತೋಷಕ್ಕಿಂತ ಸಂತೋಷವುಂಟೆ? ಅದು ಎಂದಿಗೆ ಲಭಿಸುವುದೋ!

**ಸಾಯಣ**—ಬುಕ್ಕಣ್ಣಾ, ವಿರೂಪಾಕ್ಷೇಶ್ವರನು ನಿನ್ನ ಗುರು ಭಕ್ತಿಯನ್ನೂ ಜ್ಞಾನಾತುರತೆಯನ್ನೂ ಸಫಲಗೊಳಿಸುವನು. ಚಿಂತೆ ಪಡಬೇಡ. ನಾನಿನ್ನು ಹೋಗಿಬರಲೆ? [**ತೆರೆ ಬೀಳುವುದು.**

## ದೃಶ್ಯ ೪

[ಶ್ರೀರಂಗ ಕ್ಷೇತ್ರ. ದೇವಾಲಯದ ನವರಂಗದಲ್ಲಿ ಶ್ರೀ ವೈಷ್ಣವ ಗೋಷ್ಠಿ ನೆರೆದಿರುವುದು. (೧ನೆಯ ಭಾಗದ ೩ನೆಯ ದೃಶ್ಯದಂತೆ.) ಕೆಲ ಮಂದಿ ಭಟ್ಟರು ಸ್ತೋತ್ರಗಳನ್ನು ಹೇಳುತ್ತಿರುವರು.]

**ಭಟ್ಟರು—**

(ವೃತ್ತ) ಅಂದಾ ವಿದೇಶಾಟನೆಯೊಳ್ ದಶಾಸ್ಯನಂ।
ಕೊಂದುರ್ವಿಯೊಳ್ ಧರ್ಮವ ಕಾಯ್ದ ರೀತಿಯಿಂ ॥
ದಿಂದಾ ತುರುಷ್ಕೌಘವನಟ್ಟಿ ದೂರದಿಂ।
ಬಂದಿರ್ಪೆ ಧರ್ಮೋತ್ಸುಕ ರಂಗನಾಯಕಾ ॥

ಬಾರೈ ವಿಭೋ ರಂಗಪತೇ ರಮಾಪತೇ।
ತೋರೈ ವಿಭೋ ನಿನ್ನಯ ದಿವ್ಯರೂಪವಂ ॥
ಬೀರೈ ವಿಭೋ ನಿನ್ನಯ ಮಂದಹಾಸವಂ।
ತಾರೈ ವಿಭೋ ನಿನ್ನ ಪದಾಬ್ಜದಾಸ್ಯವಂ ॥

ಶೃಂಗಾರಸೌಭಾಗ್ಯನಿಧೇ ದಯಾನಿಧೇ।
ಭೃಂಗಾಯಿತಾಸ್ಮಪ್ನ ನಿಜಾಂಘ್ರಿಪಂಕಜ ॥
ಅಂಗೀಕೃತಾಸ್ಮದ್ವಿನಯಾರ್ತವಾಕ್ಯ ನೀಂ।
ರಂಗೇಶ ಬಾ ರಾಕ್ಷಸಹಾರಿ ಬಾರೆಲೈ ॥

[ಅತಿವೃದ್ಧರಾದ ವೇದಾಂತ ದೇಶಿಕರು ಸಶಿಷ್ಯರಾಗಿ ಪ್ರವೇಶಿಸುವರು. ಎಲ್ಲರೂ ಎದ್ದು ನಿಲ್ಲುವರು.]

**ಕೇಶವದಾಸರು—**ದೇಶಿಕವರೇಣ್ಯ, ಇಂದಿನ ಮಹೋತ್ಸವವು ತಮ್ಮದು. ತಮ್ಮನ್ನು ಬಿಟ್ಟು ನಾವು ಪಡುತ್ತಿದ್ದ ಸಂಭ್ರಮವು ಯಜ್ಞೇಶ್ವರನಿಲ್ಲದ ಯಾಗಶಾಲೆಯ ಸಂಭ್ರಮದಂತೆ ಇತ್ತು.

**ಪರಾಂಕುಶಭಟ್ಟರು—**ಅರವತ್ತು ವರ್ಷಕಾಲ ತಾವು ಅವಿಚ್ಛಿನ್ನವಾಗಿ ಮಾಡಿದ ತಪಸ್ಸು ಈ ದಿನ ಸಫಲವಾಯಿತು. ನಮ್ಮ ರಂಗ

ರಾಜನು ಸುಪ್ರಸನ್ನನಾಗಿ ಹಿಂದಿರುಗಿ ಬಂದಿರುವುದು ತಮ್ಮ ತಪೋ ಮಹಿಮೆಯಿಂದ.

**ದೇಶಿಕ**—ಮಿತ್ರರೆ, ಅಭಿವಂದ್ಯನಾದವನು ನಾನಲ್ಲ. ಭಗೀರಥನ ಸಂಕಲ್ಪನಿಷ್ಠೆಯು ಪರಶಿವನನ್ನು ಮೆಚ್ಚಿಸಿ ದೇವಗಂಗೆಯನ್ನು ಕರೆ ತಂದಂತೆ, ಯಾವ ಮಹನೀಯರ ಧೈರ್ಯ ಸ್ಥೈರ್ಯ ಶೌರ್ಯಗಳು ರಂಗನಾಥನನ್ನು ಮೆಚ್ಚಿಸಿ ಆತನ ದಿವ್ಯ ಮೂರ್ತಿಯನ್ನು ಕರೆತಂದಿರು ವುವೋ ಅವರು ನಮಗೆಲ್ಲರಿಗೂ ಮಹೋಪಕಾರಿಗಳು. ಅವರೇ ನಮಗೆಲ್ಲ ರಿಗೂ ವಂದನೀಯರು. ಆ ಧೀರಪ್ರಮುಖರಾರು? ಅವರೆಲ್ಲಿರುವರು?

**ಕೇಶವದಾಸರು**—ಅವರನ್ನಿಲ್ಲಿಗೆ ಕರೆತರಲು ವಾತೂಲ ದೇಶಿಕರು ಹೋಗಿರುವರು.

**ಒಬ್ಬ ವೈಷ್ಣವ**—ಅದೋ, ಅವರೂ ಬರುತ್ತಿರುವರು.

[ಪ್ರವೇಶ: ವಾತೂಲ ದೇಶಿಕ, ಗೋಪಣಾರ್ಯ, ಇತರ ಪರಿವಾರ. ಎಲ್ಲರೂ ಏಳುವರು.]

**ವಾತೂಲ ದೇಶಿಕ**—ದೇಶಿಕವರ್ಯರೆ, ನಮ್ಮ ಇಂದಿನ ಸಂತೋಷವೆಂಬ ಹಾಲಿಗೆ ತಮ್ಮ ಆಗಮನದಿಂದ ಸಕ್ಕರೆ ಬೆರೆತಂತಾ ಯಿತು. ಈ ಮಹೋತ್ಸವವನ್ನು ನಮಗೆ ಆಗಮಾಡಿಸಿದವರು ಈ ಗೋಪಣಾರ್ಯರು,—ವಿಜಯನಗರ ರಾಜ್ಯದ ದಂಡನಾಯಕರು. ಬ್ರಾಹ್ಮಣರಾದ ಇವರು ಕ್ಷತ್ರಿಯ ಸಾಹಸವನ್ನು ತೋರಿರುವುದು ಆಶ್ಚರ್ಯವಲ್ಲವೆ?

**ದೇಶಿಕ**—ವಾತೂಲ ದೇಶಿಕ, ಈ ಮಹೋತ್ಸವದ ವಾರ್ತೆ ಯನ್ನು ಕೇಳಿದರೆ ಈ ಆನಂದದಲ್ಲಿ ಭಾಗಿಯಾಗಬೇಕೆಂಬ ಆಶೆ ಎಂಥವ ನಿಗೆ ತಾನೆ ಹುಟ್ಟದೆ ಇರುವುದು? ಗೋಪಣಾರ್ಯರೆ, ವೈಷ್ಣವ ಪ್ರಪಂಚಕ್ಕೆಲ್ಲಾ ನೀವು ಶಾಶ್ವತವಾದ ಮಹೋಪಕಾರವನ್ನು ಮಾಡಿರು ವಿರಿ. ನಿಮ್ಮಿಂದ ನಾವು ಕೃತಾರ್ಥರಾದೆವು. ನಮ್ಮನ್ನು ತೊರೆದು ಹೋಗಿದ್ದ ರಂಗವಿಭುವು ನಿಮ್ಮ ಪರಾಕ್ರಮದಿಂದ ಸುಪ್ರೀತನಾಗಿ ಬಂದು ಪುನಃ ನಮಗೆ ದರ್ಶನವನ್ನು ಕರುಣಿಸಿರುವನು. ನೀವು

ತೋರಿರುವ ಶೌರ್ಯವು ಶ್ರೀ ಪರಶುರಾಮ ಚರಿತೆಯನ್ನು ಸ್ಮರಣೆಗೆ ತರುತ್ತಿದೆ.

**ಗೋಪಣ**—ಪೂಜ್ಯರೆ, ಈ ಕೀರ್ತಿಗೆ ಅರ್ಹನು ನಾನಲ್ಲ. ಅದು ನಮ್ಮ ದೊರೆಗಳಿಗೂ ಗುರುಗಳಿಗೂ ಸಲ್ಲತಕ್ಕುದು. ಯಾವ ಮಹಾ ರಾಜನು ಸ್ವಾತ್ಮಾರ್ತೋಚ್ಚಾಟ್ರಯ ಧುರಂಧರನಾಗಿ ವಿಜಯನಗರ ಸಾಮ್ರಾಜ್ಯವನ್ನಾಳುತ್ತಿರುವನೋ, ಯಾವ ಯೋಗಿಯು ಆತನಿಗೆ ಪ್ರಥಮಾಚಾರ್ಯನಾಗಿ ರಾಜ್ಯಯಂತ್ರವನ್ನು ನಡೆಯಿಸುತ್ತಿರುವನೋ, ಆ ಬುಕ್ಕ ಸಾರ್ವಭೌಮನೂ ಆ ವಿದ್ಯಾರಣ್ಯ ಸ್ವಾಮಿಗಳೂ ಈ ಮಹೋತ್ಸವಕ್ಕೆ ಕಾರಣಕರ್ತರು. ಅವರ ಆಜ್ಞಾಧಾರಕನಾದವನು ನಾನು.

**ದೇಶಿಕ**—ಗೋಪಣಾರ್ಯರೆ, ನಿಮ್ಮ ವಚನವು ಆಸ್ತಿಕ ವೃಂದಕ್ಕೆ ಪರಮಾನಂದವನ್ನುಂಟುಮಾಡತಕ್ಕುದಾಗಿದೆ. ವಿದ್ಯಾರಣ್ಯರು ಪೂರ್ವಾ ಶ್ರಮದಲ್ಲಿ ಮಾಧವಪಂಡಿತರೆಂದು ಪ್ರಸಿದ್ಧರಾಗಿದ್ದವರಲ್ಲವೆ?

**ಗೋಪಣ**—ಹೌದು.

**ದೇಶಿಕ**—ಅವರು ನನಗೆ ಆಬಾಲ್ಯಮಿತ್ರರು. ಅವರೂ ನಾನೂ ಬಹುಕಾಲ ಕಾಂಚೀಪುರದಲ್ಲಿ ಸಹಾಧ್ಯಾಯಿಗಳಾಗಿದ್ದೆವು ........ ಹಿಂದೆ ನಾನು ಸತ್ಯಮಂಗಲದಲ್ಲಿದ್ದಾಗ ಅವರು ಅಲ್ಲಿಗೆ ಯಾತ್ರಿಕರಾಗಿ ಮಾರ್ಗವಶದಿಂದ ಬಂದಿದ್ದರು. ಆಗಿನ ನಮ್ಮ ಸಂಭಾಷಣೆಯಲ್ಲಿ ಬ್ರಾಹ್ಮಕ್ಷಾತ್ರ ಧರ್ಮಗಳು ಸೂರ್ಯನ ತೇಜೋಷ್ಣಗಳಂತೆ ಒಂದುಗೂಡಿರಬೇಕೆಂದೂ, ಕ್ಷತ್ರಿಯ ಧರ್ಮೋಜ್ಜೀವನವು ಬ್ರಾಹ್ಮಣ ಧರ್ಮಕ್ಕೆ ಸೇರಿದ ಕರ್ತವ್ಯವೇ ಎಂದೂ ಪ್ರತಿಪಾದನೆಮಾಡಿದ್ದರು. ಈಗ ಅದು ನನ್ನ ಜ್ಞಾಪಕಕ್ಕೆ ಬರುತ್ತಿದೆ. ಅದಕ್ಕೆ ಬೇಕಾದ ದೃಷ್ಟಾಂತವು ಈಗ ದೊರೆತಂತಾಯಿತು. ಗೋಪಣಾರ್ಯ, ನಿಮ್ಮ ರಾಜ್ಯದ ವೃತ್ತಾಂತವನ್ನು ಕೇಳಬೇಕೆಂಬ ಕುತೂಹಲವು ನನಗೆ ಈಗ ಇಮ್ಮಡಿ ಯಾಗಿದೆ.

**ಗೋಪಣ**—ನಮ್ಮ ಗುರುಗಳವರು ತಮ್ಮೊಡನೆ ಹೇಳಿದ ಸಿದ್ಧಾಂತವನ್ನೇ ಪದೇ ಪದೇ ಎಲ್ಲರಿಗೂ ಬೋಧಿಸುತ್ತಿರುವರು. ರಾಜ ದರ್ಪದೊಡನೆ ಧರ್ಮನಿಷ್ಠೆಯೂ, ಬಾಹುಬಲದೊಡನೆ ಮೇಧಾಬಲವೂ, ಸತ್ಕರ್ಮನಿಷ್ಠೆಯೊಡನೆ ನಿಷ್ಕಾಮ ಭಾವವೂ ಸೇರಿದಲ್ಲದೆ ಲೋಕಕ್ಕೆ ಕ್ಷೇಮವಾಗದೆಂಬ ಮೂಲ ತತ್ತ್ವವನ್ನು ನಮ್ಮ ರಾಜರಿಗೆ ಉಪದೇಶ ಮಾಡಿ, ಚಕ್ರಾಧಿಪತ್ಯವನ್ನಾಳಲು ಶೂರರಾದ ಅರಸುಮಕ್ಕಳ ಸಹಾಯಕ್ಕೆ ಶುದ್ಧಸತ್ತ್ವರಾದ ಪಂಡಿತರನ್ನು ಜೋಡಣೆ ಮಾಡಿಸುತ್ತಿರುವರು. ರಾಜಕೀಯ ವೃತ್ತಿಯಲ್ಲಿರುವವರಿಗೆ ವೇದಶಾಸ್ತ್ರಗಳ ಸಾರವನ್ನು ತಿಳಿಯ ಹೇಳುವರು; ವೈದಿಕವೃತ್ತಿಯನ್ನವಲಂಬಿಸಿದವರಿಗೆ ರಾಜನೀತಿ ಶಸ್ತ್ರ ವಿದ್ಯೆಗಳನ್ನೂ ಕಲಿಯಹೇಳುವರು. ಪಾಠ ಹೇಳುವುದರಲ್ಲಿ ಹೇಗೆಯೋ ಕತ್ತಿ ಹಿಡಿಯುವುದರಲ್ಲಿಯೂ ಹಾಗೆಯೇ ಅತಿ ನಿಪುಣರಾದ ಬ್ರಾಹ್ಮಣ ರೆಷ್ಟೋ ಮಂದಿ ವಿಜಯನಗರದಲ್ಲಿರುವರು. ನನ್ನ ಮಾತೇನು? ಮಾಧ ವಾನುಜರಾಗಿ, ಸ್ವನಾಮ ಖ್ಯಾತರಾಗಿ, ನಮ್ಮ ಸಾಮ್ರಾಜ್ಯದ ಪೂರ್ವ ದಿಗ್ಭಾಗದಲ್ಲಿ ಸಾಚಿವ್ಯ ಪದವಿಯನ್ನು ವಹಿಸಿರುವ ಸಾಯಣಾ ಚಾರ್ಯರೇ ಅಂತಹವರಲ್ಲಿ ಅಗ್ರಗಣ್ಯರಾಗಿರುವರು. ನಮ್ಮ ಸಾಮ್ರಾ ಜ್ಯದ ಪಶ್ಚಿಮ ದಿಗ್ಭಾಗದ ಸಚಿವರಾಗಿ ವೇದವೇದಾಂತಜ್ಞರಾಗಿ, ಪ್ರಸಿದ್ಧರಾದ ಮಾಧವಾಮಾತ್ಯರೂ ವೀರಾಗ್ರೇಸರರೆನ್ನಿಸಿಕೊಂಡಿರು ವರು. ಅವರು ಯವನರೊಡನೆ ನೌಕಾಯುದ್ಧ ಮಾಡಿ ಅವರನ್ನೋಡಿಸಿ, ಸಮುದ್ರ ತೀರದಲ್ಲಿ ಸಪ್ತನಾಥ ಲಿಂಗವನ್ನು ಪ್ರತಿಷ್ಠೆಮಾಡಿಸಿರುವ ಮಹನೀಯರು. ಅಂತಹ ಮಹಾಮಹಿಮರಿರುವಾಗ ನಾನು ಹೇಗೆ ಪ್ರಶಂಸಾರ್ಹನಾದೇನು?

**ದೇಶಿಕ**—ಗೋಪಣಾರ್ಯ, ನಿಮ್ಮ ರಾಜ್ಯವೇ ಧರ್ಮರಾಜ್ಯ. ಅದರ ಸುದ್ದಿಯನ್ನು ಕೇಳುವಂತಾದುದರಿಂದ ನನ್ನ ಇಷ್ಟು ದೀರ್ಘ ಕಾಲದ ಜೀವನವು ಸಾರ್ಥಕವಾಯಿತು. ವಿದ್ಯಾರಣ್ಯರಂತಹ ಗುರು ವಿಗೆ ನಿಮ್ಮ ಮಹಾರಾಜನಂತಹ ಅನುಗುಣನಾದ ಶಿಷ್ಯನು ದೊರೆತಿರು ವುದು ಈ ಜಾನಪದದ ಭಾಗ್ಯವಿಶೇಷವೇ ಸರಿ!

**ಗೋಪಣ**—ಆ ಸನ್ನಿವೇಶವನ್ನೆಷ್ಟು ಕೊಂಡಾಡಿದರೂ ಮುಗಿಯದು. ಹಿಂದೆ ರಾಜ್ಯ ಸಂಸ್ಥಾಪಕರಾದ ಅಣ್ಣ ಹರಿಹರ ಮಹಾರಾಜರು ಹೇಗಿದ್ದರೋ ಈಗ ತಮ್ಮ ಬುಕ್ಕಣ್ಣ ಸಾರ್ವಭೌಮರೂ ಹಾಗೆಯೇ ಭಗವದ್ಭಾಗವತ ಭಕ್ತರಾಗಿ, ಸದ್ವಿದ್ಯಾಭಿಮಾನಿಗಳಾಗಿ, ದಾನಶೀಲರಾಗಿ, ಕರ್ತವ್ಯತತ್ಪರರಾಗಿರುವರು. ಶತ್ರುಗಳನ್ನೋಡಿಸಿ ರಾಜ್ಯವನ್ನು ವಿಶಾಲಗೊಳಿಸುವುದರಲ್ಲಿ ನಿಸ್ತಂದ್ರರಾಗಿರುವಂತೆಯೇ ಧರ್ಮವನ್ನು ತಿಳಿದು ಪ್ರಜಾಹಿತವನ್ನೆಸಗುವುದರಲ್ಲಿ ನಿರಾಲಸ್ಯರಾಗಿರುವರು. ಅವರಿಗಾಗಿಯೂ ಲೋಕಕ್ಕಾಗಿಯೂ, ಅವರಿಂದ ಪರಿಪೋಷಿತರಾದ ಬಹುಮಂದಿ ಪಂಡಿತರು, ಸಾಯಣ ಪ್ರಭೃತಿಗಳು ಹಾಕಿದ ಮಾರ್ಗದಲ್ಲಿ, ವೇದಭಾಷ್ಯಾದಿ ಬಹು ಗ್ರಂಥಗಳನ್ನು ರಚಿಸುತ್ತಿರುವರು.

**ದೇಶಿಕ**—ಗೋಪಣಾರ್ಯ, ಈ ವೃತ್ತಾಂತವು ನನ್ನ ಕಿವಿಗಳಿಗೆ ಅಮೃತಪ್ರಾಯವಾಗಿದೆ. ಇನ್ನೂ ಹೇಳಬೇಕು.

**ಗೋಪಣ**—ಗೀರ್ವಾಣ ಭಾಷೆಯಲ್ಲಿ ಮಾತ್ರವಲ್ಲ; ಕರ್ಣಾಟಕಾಂಧ್ರ ದ್ರಾವಿಡ ಭಾಷೆಗಳಲ್ಲಿಯೂ ಅನೇಕ ಮಂದಿ ಕವಿಗಳು ವಿವಿಧ ಗದ್ಯ ಪದ್ಯ ಪ್ರಬಂಧಗಳನ್ನು ರಚಿಸುತ್ತಿರುವರು.

**ದೇಶಿಕ**—ಅದೀಗ ಸರಿ.

**ಗೋಪಣ**—ನಮ್ಮ ಮಹಾರಾಜರ ಸೊಸೆ ಗಂಗಮಾಂಬೆ ತನ್ನ ಪತಿಯ ವಿಜಯಯಾತ್ರೆಯನ್ನು ಬಣ್ಣಿಸುವ ಕಾವ್ಯವೊಂದನ್ನು ಗೀರ್ವಾಣ ವಾಣಿಯಲ್ಲಿ ಬರೆದಿರುವಳು.

**ದೇಶಿಕ**—ಆಹಾ, ಇಷ್ಟೊಂದು ಶುಭವನ್ನು ಈ ಕಿವಿಗಳಿಂದ ಕೇಳುವೆನೆಂದು ನಾನು ಎಂದೂ ಅಂದುಕೊಂಡಿರಲಿಲ್ಲ. ದೇವರು ನನಗೆ ಕೊಟ್ಟ ದೀರ್ಘಾಯುಷ್ಯವು ಈಗ ಸಾರ್ಥಕವಾಯಿತು.

**ಗೋಪಣ**—ನಮ್ಮ ಮಹಾರಾಜರ ಆಜ್ಞೆಯಿಂದಲೇ ನಾನು ಸೇನೆಯೊಡನೆ ಹೊರಟು, ಕಂಚಿ, ತಿರುಪತಿ ಮೊದಲಾದ ಸ್ಥಳಗಳನ್ನಾವರಿಸಿಕೊಂಡಿದ್ದ ವಿದೇಶೀಯರನ್ನು ಪರಾಜಿತರನ್ನಾಗಿ ಮಾಡಿ ಶ್ರೀ

ಭೂನೀಳಾ ಸಮೇತವಾದ ಈ ಶ್ರೀರಂಗನಾಥ ವಿಗ್ರಹವನ್ನು ತಂದು ತಮ್ಮಲ್ಲೊಪ್ಪಿಸುವಂತಾಯಿತು. ಇನ್ನು ಮುಂದೆ ಇಲ್ಲಿ ನಿತ್ಯ ಕೈಂಕರ್ಯವು ನಡೆಯುವುದಕ್ಕೆ ತಕ್ಕ ದ್ರವ್ಯೋಪಪತ್ತಿಯನ್ನು ಕಲ್ಪಿಸಿ ಬರಬೇಕೆಂದೂ ರಾಜರು ನನಗಾಜ್ಞಾಪಿಸಿರುವರು.

**ದೇಶಿಕ**—ಸ್ವಗುಣವನ್ನು ಬಚ್ಚಿಟ್ಟು ಸ್ವಾಮಿ ಗುಣವನ್ನು ಪ್ರಕಾಶಗೊಳಿಸುವುದು ಸಜ್ಜನರ ಪದ್ಧತಿ. ಆದರೆ ಉಪಕೃತರಾದವರು ಪ್ರತ್ಯಕ್ಷನಾಗಿರುವ ಉಪಕಾರಿಯನ್ನು ವಂದಿಸದೆ ಇರಲಾಗುವುದೆ? ಗೋಪಣಾರ್ಯ, ಭಗವದಾರಾಧನೆಯಲ್ಲಿ ತಾವು ತೋರಿರುವ ಶೌರ್ಯೌದಾರ್ಯಗಳನ್ನು ಈ ದೇವಮಂದಿರದ ಶಿಲಾಫಲಕಗಳಲ್ಲುಲ್ಲೇಖಿಸಿ, ಆ ರೀತಿ ಲೋಕಕ್ಕೊಂದು ಶಾಶ್ವತವಾದ ಧರ್ಮದೀಪಿಕೆಯನ್ನು ಕಲ್ಪಿಸುವುದು ಅಸ್ಮದಾದಿಗಳ ಕರ್ತವ್ಯವೆಂದು ನಾನು ಭಾವಿಸಿಕೊಂಡಿದ್ದೇನೆ.

**ಸಭಿಕರು**—ಹೌದು, ಹೌದು!

ಅದು ಅವಶ್ಯ ಕರ್ತವ್ಯ!

ಈಗಲೇ ಮಾಡಲೇ ಬೇಕಾದುದು!

**ವಾತೂಲ ದೇಶಿಕ**—ದೇಶಿಕಮಣೀ, ಉಲ್ಲೇಖ್ಯ ವಚನಗಳು ತಮ್ಮ ಮುಖದಿಂದಲೇ ಬರಬೇಕು.

**ಸಭಿಕರು**—ಹೌದು, ಹೌದು!

ಅದೇ ಉಚಿತ!

**ದೇಶಿಕ**—ಹಾಗಾದರೆ ನಾನು ಈ ರೀತಿ ಹೇಳುವೆನು :—

**(ಸಂಸ್ಕೃತ, ವೃತ್ತ)**

ಆನೀಯಾನೀಲಶೃಂಗದ್ಯುತಿರಚಿತ ಜಗದ್ರಂಜನಾದಂಜನಾದ್ರೇಃ।
ಚೆಂಚ್ಯಾಮಾರಾಧ್ಯ ಕಂಚಿತ್ ಸಮಯ ಮಥನಿಹತ್ಯೋದ್ಧನುಷ್ಕಾಂ
ಸ್ತುಲುಷ್ಕಾನ್ ॥

ಲಕ್ಷ್ಮೀಕ್ಷ್ಮಾಭ್ಯಾಮುಭಾಭ್ಯಾಂ ಸಹ ನಿಜನಗರೇ ಸ್ಥಾಪಯನ್
ರಂಗನಾಥಂ।
ಸಮ್ಯಗ್ವರ್ಯಾಂ ಸಪರ್ಯಾಮಕೃತ ಭುವಿ ಯಶೋದರ್ಪಣೋ
ಗೊಪ್ಪಣಾರ್ಯಃ ॥

**ಎಲ್ಲರೂ**—ಬಹು ಚೆನ್ನಾಗಿದೆ !
ಹೃದಯಂಗಮವಾಗಿದೆ !!

**ದೇಶಿಕ**—

ವಿಶ್ವೇಶಂ ರಂಗರಾಜಂ ವೃಷಭಗಿರಿ ತಟಾತ್ ಗೊಪ್ಪಣಿಕ್ಷೋಣಿದೇವೋ।
ನೀತ್ವಾ ಸ್ವಾಂ ರಾಜಧಾನೀಂ ನಿಜಬಲನಿಹತೋತ್ಸಿಕ್ತ ತೌಲುಷ್ಕಸೈನ್ಯಃ॥
ಕೃತ್ವಾ ಶ್ರೀರಂಗಭೂಮಿಂ ಕೃತಯುಗಸಹಿತಾಂ ತಂ ಚ ಲಕ್ಷ್ಮೀ
ಮಹೀಭ್ಯಾಂ।
ಸಂಸ್ಥಾಪ್ಯಾಸ್ಯಾಂ ಸರೋಜೋದ್ಭವ ಇವ ಕುರುತೇ ಸಾಧುಚರ್ಯಾಂ
ಸಪರ್ಯಾಂ॥

**ಸಭಿಕರು**—ಉಚಿತವಾಗಿದೆ !

ಉದಾತ್ತವಾಗಿದೆ !!

**ವಾತೂಲ ದೇಶಿಕ**—ಕೇಶವದಾಸರೆ, ಈ ಶ್ಲೋಕ ರತ್ನಗಳನ್ನು ಶಿಲ್ಪಿಗೆ ಬರೆದುಕೊಟ್ಟು ಪ್ರಾಕಾರದಮೇಲೆ ಸ್ಫುಟಾಕ್ಷರಗಳಲ್ಲಿ ಕೆತ್ತುವಂತೆ ಹೇಳಬೇಕು.

**ಕೇಶವದಾಸ**—ಈಗಲೇ ಹಾಗೆ ಮಾಡಿಸುವೆನು.

**ದೇಶಿಕ**—ಗೋಪಣಾರ್ಯರೆ, ನನ್ನ ಆಬಾಲ್ಯಮಿತ್ರರೂ, ನಿಮ್ಮ ಸಾಮ್ರಾಜ್ಯದ ಸಚಿವರೂ, ನಿಮ್ಮ ಗುರುಗಳೂ ಆದ ವಿದ್ಯಾರಣ್ಯರಿಗೆ ನನ್ನ ಸಂತೋಷಾತಿಶಯವನ್ನು ತಿಳುಹಿಸುವಿರಾ?

ಇರಿಗುಂ ಕಿವಿಗಳನಾರ್ತ।
ಸ್ವರಮುದ ಪರಿಹರಿಸಲಾರದವನೆದೆಯುಂ ತಾಂ ॥
ಬಿರಿಯಿಕು ಮಾಯಾತನೆಯುಂ।
ಮರೆಯಿಕು ವಾರ್ತೆಯು ಕಳೆದು ಬಾಳ್ವರ ಹಸಿತಂ ॥

ಘನ ವಿದ್ಯಾರಣ್ಯನನೀ।
ಜನವುಂತಹ ಹಸಿತವುುಖದೆ ಪೊಗಳುವುದೀಗಳ್ ॥
ಜನಪದ ಜೀವನ ಶಿಖಿಯಾ।
ತನಿನುಜ್ಜ್ವಲವಾದು ದಾತನಿಂ ಕೃತಿಯುುಂಟೇಂ ॥

**ವಾತೂಲ ದೇಶಿಕ**—ಇನ್ನು ಮಹಾಮಂಗಳಾರತಿಯಾಗ ಬಹುದಷ್ಟೆ?

[ಎಲ್ಲರೂ ಏಳುವರು, ತೆರೆ ಬೀಳುವುದು.

---

## ದೃಶ್ಯ ೫

[ವಿಜಯನಗರದ ಬಳಿಯ ಮಹಾನವಮಿಯ ದಿಬ್ಬ (ಜಗುಲಿ). ಅದರ ಮೇಲೆ ಇಮ್ಮಡಿ ಹರಿಹರ ಮಹಾರಾಜನೂ, ವಿದ್ಯಾರಣ್ಯ ಸ್ವಾಮಿಗಳೂ, ಸಾಯಣಾಚಾರ್ಯರೂ, ಇತರ ಮಂತ್ರಿಗಳೂ, ದಂಡಾಧಿಕಾರಿಗಳೂ, ಸಾಮಂತರಾಜರೂ ಉಚಿತಾಸನಗಳಲ್ಲಿ ಕುಳಿತಿರುವರು. ಮಂಗಳ ವಾದ್ಯಗಳು ಮೊಳಗುತ್ತಿರುವುವು. ಅವರ ಮುಂದುಗಡೆ ವಿಜಯದಶಮಿಯ ಸಂದಣಿ. ಅಲ್ಲಲ್ಲಿ ಅಂಗಡಿಗಳೂ ವಿನೋದದ ಕೂಟಗಳೂ ಕಾಣುತ್ತಿರುವುವು. ಬಗೆಬಗೆಯ ಜನರು ತಂಡೋಪತಂಡವಾಗಿ ಸಂಭ್ರಮದಿಂದ ಓಡಾಡುತ್ತಿರುವರು. ಜಗುಲಿಯ ಮೇಲಿನ ರಾಜಸಭೆಯು ಈ ಮೆರವಣಿಗೆಯ ಕೋಲಾಹಲವನ್ನು ಕುತೂಹಲದಿಂದ ನೋಡುತ್ತಿರುವುದು. ಕಡೆಗೆ ಒಂದು ಗೌಡ ಜನರ ಗುಂಪು ಕೋಲಾಟ ಹಾಕಿಕೊಂಡು ಬರುವುದು.]

**ಕೋಲಾಟದವರು**—(ಹಾಡಿಕೊಂಡು ಬರುವರು.)

(ಸಾಂಗತ್ಯ)

ಶರಣು ಶರಣು ದೇವ ಪಂಪಾಪತೇ ನಿನ್ನ
ಚರಣಕೆ ನಮಿಪೆವು ಪಂಪಾಪತೇ ॥ ಪ. ॥

ಚರಣಕೆ ನಮಿಪೆವು ಪಂಪಾಪತೇ ನಮ್ಮ
ಕರುಣಿಸಿ ಕಾಪಾಡು ಪಂಪಾಪತೇ ॥ ಅ. ಪ. ॥

ಗೆಜ್ಜೆಯ ಕಾಲಿನ ಗಣನಾಯಕಾ ದೇವ
ಸಜ್ಜನಪಾಲಕ ಶುಭದಾಯಕಾ।
ಕಜ್ಜಾಯಕಡುಬಿನ ನೈವೇದ್ಯವನು ಕೊಂಡು
ಕಜ್ಜಗಳಾಗಿಸು ಗಣನಾಯಕಾ ॥

ಶಾರದೆ ಕರುಣದಿ ನೋಡವ್ವಾ ತಾಯೆ
ಸಿರಿದೇವಿ ವರಗಳ ನೀಡವ್ವಾ।
ಗೌರಿಯೆ ಹರುಷವ ಮಾಡವ್ವಾ ನಿಮ್ಮ
ಮರೆಯದ ಮಕ್ಕಳು ನಾವವ್ವಾ ॥

ವಿದ್ಯಾತೀರ್ಥರ ಪದಕೆರಗುವೆವು ನಾವು
ವಿದ್ಯಾರಣ್ಯರ ಪಾದ ಹಿಡಿಯುವೆವು ।
ವಿದ್ಯಾವಂತರಿಗೆ ಕೈಮುಗಿಯುತಲಿ ನಾವು
ವಿದ್ಯಾಬುದ್ಧಿಗಳನ್ನು ಕಲಿಯುವೆವು ॥

ವಿಜಯನಾಗರದ ಸೋಜೀನೆಂಬೆ ಆದರ
ಧ್ವಜಪತಾಕೆಗಳಂದವೇನೆಂಬೆ।
ಗಜಹಯರಥಪಂಕ್ತಿಯೇನೆಂಬೆ ಆದರ
ಪ್ರಜೆಯ ಕೋಲಾಹಲವೇನೆಂಬೆ ॥

ತುಂಗಭದ್ರಾದೇವಿ ಮಂಗಳಗಳ ಬೀರಿ
ಸಿಂಗಾರಗಳ ತೋರಿ ಪರಿವಳಿಲ್ಲಿ।
ಕಂಗೊಳಿಪುವು ಗೋಪುರಗಳಂತೆ ತೋರುವ
ಶೃಂಗಗಳನು ತಾಳ್ದ ಗಿರಿಗಳಿಲ್ಲಿ ॥

ರಾಮಚಂದ್ರನ ಸಂತಯಿಸಿದ ವನವಿದು
ನೇಮದ ತಾಪಸರಾಶ್ರಮವು।
ರಾಮಣೀಯದ ಬೀಡು ಎನಿಸಿರುವೀನಾಡು
ಕಾಮಾರಿ ವಿಹರಿಸುವುದ್ಯಾನವು ॥

ಈ ನಾಡ ಕಥೆಗಳ ಪಾಡುವೆವು ನಾವು
ಈ ನಾಡ ಹಗೆಯ ಚೆಂಡಾಡುವೆವು।
ಈ ನಾಡ ಸಿರಿಯ ಕಾಪಾಡುವೆವು ನಾವು
ಈ ನಾಡಿನೊಳು ಕುಣಿದಾಡುವೆವು ॥

ಹರಿಯಣ್ಣ ಕಂಪಣ್ಣ ಬುಕ್ಕಣ್ಣ ಮಾರಣ್ಣ
ಮುದ್ದಣ್ಣ ಎಂಬ ಸೋದರರೈವರು।
ಮೆರೆದು ಪಾಂಡವರಂತೆ ತರಿದು ದುಷ್ಟರನೆಲ್ಲ
ಭರದಿ ರಾಜ್ಯವನಿಲ್ಲಿ ಹೂಡಿದರು ॥

ವೀರಾಧಿವೀರನು ಹಿರಿಯನು ಹರಿಹರ
ಧಾರುಣಿಪಾಲನು ಧಾರ್ಮಿಕನು।
ಗುರುಪಾದಕೆರಗುತ ಅರಿಗಳನಿರಿಯುತ
ವರಪುರವಿದನಂದು ಕಟ್ಟಿದನು ॥

ಶೂರಾಧಿಶೂರನು ಬುಕ್ಕಭೂಪಾಲನು
ಸದ್ಗುಣವಂತನು ಸಿರಿವಂತನು।
ವೈರಿಗಣವನಟ್ಟಿ ಕ್ರೂರಿಗಳನು ಕುಟ್ಟಿ
ಭೂರಿಯಶದಿ ಜಗವಾಳಿದನು ॥

ಪಾಂಡ್ಯರ ಖಂಡಿಸಿ ಚೋಳರ ಸೀಳಿಸಿ
ಪರದೇಶದರಸರ ನೀಡಾಡುತ।
ಗಂಡರೊಳ್ ಗಂಡನು ಎನಿಸುತಲವನು ಆ
ಖಂಡಲನಂದದಿ ರಾಜಿಸಿದ ॥

ಆ ರಾಜನುದರದಿ ಜನಿಸಿದ ಧೀರನು
ರಾರಾಜಿಪನು ನಮ್ಮ ಮಾರಾಯನು।
ವೀರಪ್ರತಾಪನು ಹರಿಹರ ಭೂಪನು
ಧಾರುಣೀ ಸತಿಯುಳನೊಲಿಸಿಹನು ॥

ಷೋಡಶದಾನವ ನೀಡಿದುದಾರಿಯು
ನಾಡ ಬಿತ್ತರಿಸಿದ ಹತವೈರಿಯು।
ಗಾಢದಿ ವೇದಶಾಸ್ತ್ರಂಗಳು ಬೆಳೆವಂತೆ
ಮಾಡಿದ ಸದ್ಧರ್ಮದುಪಕಾರಿಯು ॥

ದುಷ್ಟರ ಮುರಿಯುತೆ ಶಿಷ್ಟರ ಪೊರೆಯುತೆ
ಅಷ್ಟದಿಕ್ಕುಗಳೊಳು ಕೀರ್ತಿಯನು।
ಸ್ಪಷ್ಟವಗೈಯುತಲವನು ಜನಂಗಳಿ
ಗಿಷ್ಟಾರ್ಥಂಗಳನಿತ್ತು ಕಾಯುವನು ॥

ಜಯ ಜಯ ವಿಜಯನಗರದೀರಾಜ್ಯಕೆ
ಜಯ ಜಯವೆಮ್ಮಯ ಜನಪದಕೆ।
ಜಯ ಜಯ ವೀರಪ್ರತಾಪಗೆ ಭೂಪಗೆ
ಜಯ ಜಯವೆಲ್ಲ ಸಜ್ಜನ ಲೋಕಕೆ ॥

[ಹೀಗೆ ಹಾಡಿಕೊಂಡು ಕೋಲಾಟದ ಗುಂಪು ಸಾಗಿಹೋಗುವುದು.

**ವಿದ್ಯಾರಣ್ಯ**—(ರಾಜನಕಡೆ ತಿರುಗಿ) ಹರಿಹರ ಮಹಾರಾಜ, ಈ ಕೋಲಾಟದ ಕೋಲಾಹಲವನ್ನು ನೋಡಿದಮೇಲೆ, ನಿಮ್ಮ ದೊಡ್ಡ ತಂದೆಯು ಕೈಕೊಂಡ ಮಹಾಸಮಾರಂಭವು ಇಂದಿಗೆ ನಿನ್ನ ಆಧಿಪತ್ಯ ದಲ್ಲಿ ಸಂಪೂರ್ಣವಾಗಿ ಸಫಲವಾಯಿತೆಂದು ನನಗೆ ಪರಮಸಂತೋಷ ವಾಗಿದೆ. ಯಾವ ರಾಜ್ಯದಲ್ಲಿ ಪ್ರಜಾಗಣವು ಹೀಗೆ ಉತ್ಸಾಹಶಾಲಿ ಯಾಗಿ ಹಬ್ಬಹರಿದಿನಗಳಲ್ಲಿ ಸಂಭ್ರಮಪಡುತ್ತಿರುವುದೋ ಅಲ್ಲಿ ರಾಜ್ಯದ ಅಂಗಾಂಗಗಳೆಲ್ಲವೂ ತಮ್ಮ ತಮ್ಮ ಕಾರ್ಯಗಳನ್ನು ಯಥಾವಿಧಿಯಾಗಿ ಆಚರಿಸುತ್ತಿರುವುವೆಂಬುದು ಸ್ವತಸ್ಸಿದ್ಧವಾಗಿರುವುದು. ಬ್ರಾಹ್ಮಣರ ವಿದ್ಯಾವೈದುಷ್ಯಗಳಿಗೂ ಕ್ಷತ್ರಿಯರ ಐಶ್ವರ್ಯ ಪ್ರತಾಪಗಳಿಗೂ ವೈಶ್ಯರ ಚಾತುರ್ಯ ವೈಭವಗಳಿಗೂ ಜನಪದ ಸಂತೃಪ್ತಿಯೊಂದೇ ಪ್ರಮಾಣವು. ಎಲ್ಲ ಶಕ್ತಿ ಸಂಪತ್ತುಗಳಿಗೂ ಪ್ರಜಾಸಂತುಷ್ಟಿಯೊಂದರಿಂದಲೇ ಸಾರ್ಥಕತೆ. ಎಲ್ಲ ಪ್ರತಿಭೆ ಪರಾಕ್ರಮಗಳಿಗೂ ಜನಜೀವನಾಂ ಗಣವೇ ರಂಗಭೂಮಿ. ಚಿಕ್ಕ ಹರಿಯಪ್ಪಾ, ಇಂದು ನನಗುಂಟಾಗಿರುವ

ತೃಪ್ತಿಯು ಅನನ್ಯ ಸದೃಶವಾದುದು. ನಿಮ್ಮ ದೊಡ್ಡತಂದೆ ಹರಿಹರ ಚಕ್ರವರ್ತಿಯೂ, ನಿಮ್ಮ ತಂದೆ ಬುಕ್ಕಣ್ಣ ಸಾರ್ವಭೌಮನೂ ಹಿಡಿದಿದ್ದ ದೀಕ್ಷೆಯು ಈಗ ನಿನ್ನಿಂದ ಸಾಂಗವಾಗಿದೆ. ಇನ್ನು ನಾನು ರಾಜ್ಯ ಕಾರ್ಯದಿಂದ ವಿರಮಿಸಬಹುದಲ್ಲವೆ? ನೋಡು, ನೂರಹತ್ತು ಸಂವತ್ಸರಗಳ ಘಾತಾಘಾತದಿಂದ ಈ ಶರೀರವು ಗಳಿತವಾಗಿದೆ. ಇಂಗಿತಜ್ಞನಾದ ನಿನಗೆ ಹೆಚ್ಚಾಗಿ ವಿವರಿಸಬೇಕಾದುದೇನಿದೆ? ಯಾವ ಧರ್ಮವನ್ನು ನೀನು ನಿನ್ನ ಹಿರಿಯರಂತೆ ಇಷ್ಟು ವಿಚಕ್ಷಣೆಯಿಂದ ಪರಿಪಾಲಿಸುತ್ತಿರುವೆಯೋ ಆ ಧರ್ಮವೇ ನಿನ್ನನ್ನೂ ನಿನ್ನ ರಾಜ್ಯವನ್ನೂ ಚಿರಕಾಲವೂ ಕಾಯುವುದು.

(ಕಂದ) ವರ್ಣಾಶ್ರಮ ಧರ್ಮಂಗಳ್ ।
ಪೂರ್ಣತೆಯಿಂ ನಿಲ್ಗೆ ನಿನ್ನ ರಾಜ್ಯದೊಳನಿಶಂ ॥
ಕರ್ಣಾಟಮಖಿಲ ಸೌಭಾ ।
ಗ್ಯಾರ್ಣವಮೆನಿಸಿರ್ಕೆ ಹಂಪೆಯಾಳ್ದನ ದಯೆಯಿಂ ॥

[ತೆರೆ ಬೀಳುವುದು.

ಮಂಗಳಂ

# ಶ್ರೀ ವಿದ್ಯಾರಣ್ಯ ಸ್ತುತಿ

೧

ಶ್ರೀ ವೇದವ್ಯಾಸ ದೇವ ಪ್ರಕಟಿತ ವಿಲಸದ್ಧರ್ಮ ಸಂತ್ರಾಣ ಸಕ್ತಾ।
ಪ್ರಾವೀಣ್ಯಾಂ ಭೂವಧೂಭೂಷಣ ಸುರುಚಿರ ಕರ್ಣಾಟಲೋಕಪ್ರದೀಪಂ
ಕೈವಲ್ಯಾನಂದ ಲೋಲಂ ನಿಜ ಜನಪದ ಸೌಭಾಗ್ಯ ಸಂಧಾನ ಶೀಲಂ।
ಶ್ರೀ ವಿದ್ಯಾರಣ್ಯ ಯೋಗೀಶ್ವರನಮಿತ ಕೃಪಾಪಾಂಗದಿಂ ಪೋಷಿಕೆಮ್ಮಂ

೨

ಗುರುದೇವಾ ಮರೆತಿರ್ಪೆಯೇಂ ನಿಜಜನ ಶ್ರೇಯೋವಿಚಾರಂಗಳಂ।
ಮರೆತಾಮಿರ್ಪೆವು ನಿನ್ನನೆಂಬ ಮುಳಿಸೇಂ ನಿನ್ನಂದದ ಪ್ರೇಮಿಗಳ್ ॥
ತೊರೆಯಲ್ಕಕ್ಕುಮೆ ಜನ್ಮಭೂಮಿಯುನಮೋಯೋಜಸ್ವಿ ನೀನಾವಗಂ।
ಚರಣಾಲಂಬವ ನಿನ್ನವರ್ಗೆ ಕುಡು ವಿದ್ಯಾರಣ್ಯ ಕಾರುಣ್ಯದಿಂ ॥

೩

ವಿಕಲಂ ಧರ್ಮಮುದಾಗೆ ಯೀ ಜನಪದಂ ತಾನಾಗೆ ದುಷ್ಟಾಪಹತಂ।
ಪ್ರಕಟೋತ್ಸಾಹದಿನಂದು ನಿರ್ಮಿಸಿದೆ ಪಂಪಾತೀರದೊಳ್ ರಾಜ್ಯಮಂ॥
ಅಕಲಂಕಾತ್ಮನೆ ಬಾರೆ ಯೇತಕೆ ವಿಭೋ ನಾವಿಂದು ಬೀಳಾಗಿರಲ್।
ಸಕಲ ಸ್ಮಾರ್ತ ಜಗತ್ಪ್ರಬೋಧಕ ಗುರೋ ಕರ್ಣಾಟಕೋದ್ಧಾರಕಾ ॥

೪

ಗುರು ವಿದ್ಯಾತೀರ್ಥಪಾದರ್ ಬುಧನುತಚರಿತರ್ ವೇಂಕಟಾರ್ಯರ್
ಮಗುಳ್ದಾ।
ಪರಮಾರ್ಹತ್ಪೂಜಕರ್ ಮೇಣ್ ಪರಶಿವ ಭಜಕರ್ ಮತ್ತಮುಕ್ಷೋಭ್ಯ
ತೀರ್ಥರ್ ॥

ಪರಿಶಿಷ್ಟರ್ ಶಿಷ್ಟರೆಲ್ಲರ್ ಕಲಿ ಖಲ ಚಕಿತರ್ ತುಷ್ಟರಪ್ಪಂತೆ ನೀನಾ।
ಪರಧರ್ಮ ಪ್ರಾಜ್ಯ ರಾಜ್ಯ ಪ್ರಭವಕೆ ಮೊದಲಾಳಾದೆಯೈ ಧನ್ಯವೃತ್ತಾ

೫

ಚರಣದ್ವಂದ್ವಮದೊಂದೆಯಾತ್ರೆಯನೊಡರ್ಚುತ್ತಿರ್ಪವೊಲ್ ರಾಜನುಂ
ಗುರುವುಂ ಮೈತ್ರಿಯನಾಂತು ರಾಷ್ಟ್ರರಥದಾಕರ್ಷಕ್ಕೆ ಕೈಪೂಡೆ ಮುಂ
ಬರಿಗುಂ ತಾನದೆನುತ್ತುಮಾ ಹರಿಹರೋರ್ವೀಪಾಲ ಸಾಚಿವ್ಯಮಂ।
ಪರಿಧೂತಾಖಿಲಸಂಗ ನೀಂ ತಳೆದನಾದಯ್ ಲೋಕ ಕಾರುಣ್ಯದಿಂ ॥

೬

ಮಮತಾ ಮತ್ಸರಗಳ್ಗೆ ಸಿಲ್ಕಿ ವಿಷಯಕ್ಕೀಡಾಗಿ ದೇಹಾತ್ಮ ಸಂ।
ಭ್ರಮೆಯೊಳ್ ಬಾಳ್ವ ನರಂಗೆ ದುಃಖಜನಕಂ ಸಂಸಾರಮೆಂಬರ್ ದಿಟಂ
ಸಮದಿಂ ತನ್ನವೊಲೆಲ್ಲರಂ ಬಗೆದು ತನ್ನಂ ಸರ್ವರೊಳ್ ಕಾಣ್ಬ ಸಂ।
ಯಮಿಗೀ ವಿಶ್ವಕುಟುಂಬಮೊಂದು ಬಿನದಂ ತಾನೆಂದು ನೀಂ ತೋರಿದೈ

೭

ರಾಗಾತೀತ ವಿಶುದ್ಧ ತತ್ತ್ವ ನಿರತಂ ನೀನಾಗಿಯುಂ ಲೋಕದಾ।
ಯೋಗಕ್ಷೇಮ ಧುರಂಧರ ಶ್ರಮವ ನೀಂ ಕೈಕೊಳ್ಳುತುಂ ಲೀಲೆಯಿಂ॥
ಭೋಗ ತ್ಯಾಗ ಸಮನ್ವಯ ಕ್ರಮದೆ ಸರ್ವಾತ್ಮತ್ವದಿಂ ಜೀವಿಪಾ।
ಯೋಗ ಶ್ರೇಷ್ಠ ರಹಸ್ಯಮಂ ವಿವರದಿಂ ಸರ್ವಜ್ಞ ನೀಂ ತೋರಿದೈ ॥

೮

ಭಗವಂತಂ ಭಾನುಮಂತಂ ಪಸರಿಸಿ ಬೆಳಗಂ ಬೇಗೆಯಂ ಕೂಡೆ ನಿಚ್ಚಂ।
ಜಗಮಂ ತಳ್ಕೈಸುತಿರ್ಪಾತೆರದೊಳೆ ವಿಮಲಬ್ರಹ್ಮಸತ್ತ್ವಾಭೆಯಂ
ಮೇಣ್ ॥
ಬಗೆಗೊಂಡಾಕ್ಷತ್ರಶೌರ್ಯಾತಪವನೆರಡುಮಂ ಬೀರಿ ಭೂಚಕ್ರದೊಳ್
ನೀಂ।
ಸೊಗಮಂ ಸದ್ವಿದ್ಯೆಯಂ ಮೇಣ್ ಪರತರ ಶಮವಂ ಸೂಸಿದೈ ಮೌನಿ
ಮೌಳೀ ॥

೯

ಶ್ರುತಿಸಾರಂಗಳ ಸಾರಿದಂ ಕವಿಗಳಂ ಸಂತೈಸಿದಂ ಶಾಸ್ತ್ರ ಸಂ।
ತತಿಯಂ ಪೆರ್ಚಿಸಿದಂ ಸಮಾಜ ಗತಿಯಂ ಸಂಸ್ಕಾರದಿಂ ತಿರ್ದಿದಂ ॥
ಮತವಿದ್ವೇಷವ ನೂಂಕಿದಂ ಮಥಿಸಿದಂ ದುರ್ವೃತ್ತರಂ ರಾಜ್ಯಸಂ।
ಸ್ಥಿತಿಯಂ ಮಾಧವನಂತೆ ಕಾವ ಸಚಿವಂ ಮತ್ತೆತ್ತಲೆಂಬರ್ ಜನರ್ ॥

೧೦

ಕರಗಳ್ ತಾವೆನೆ ರಾಜಿಸಲ್ ಹರಿಪ ಬುಕ್ಕರ್ ಸಾರ್ವಭೌಮೋತ್ತಮರ್
ಮೆರೆಯಲ್ ಸಾಯಣಮುಖ್ಯಸೂರಿನಿಕರಂ ವಕ್ತ್ರಂಬೊಲಾಚಾರ್ಯನೀಂ
ನೆರೆದಿರ್ದಾತ್ಮನ ಪೋಲ್ತೆ ರಾಷ್ಟ್ರವಪುವೊಳ್ ಕರ್ಣಾಟ ಸಂಜೀವನಾ।
ಪರಮ ಜ್ಯೋತಿಯೆ ತೋರುತಿಂದು ದಯೆಯಂ ಮೈದೋರು ಮೈ
ದೋರೆಯೇಂ ॥

೧೧

ನಿನ್ನಿಂದಾದುದು ನಿರ್ಮಮೇಂದ್ರ ನಿಗಮ ವ್ಯಾಖ್ಯಾನ ಸಿಂಹಾಸನಂ।
ನಿನ್ನೊಳ್ ಸೇರ್ದುವು ನಿರ್ಜಿತೋಭಯರಿಪೋ ಪ್ರವ್ರಜ್ಯ ಸಾಮ್ರಾಜ್ಯ
ಗಳ್ ॥
ನಿನ್ನಂ ಪೂಜಿಪರಾರ್ಯರಾರ್ಯ ಮಹಿಮಾ ದರ್ಶಾತ್ಮನೆಂದೇಗಳುಂ।
ನಿನ್ನಾಶಾಸನವೊಂದೆ ಸಾಕೆಮಗೆಲೈ ನಿರ್ವಾಣ ಸೌಖ್ಯಪ್ರದಾ ॥

೧೨

ನದಿಯೊಂದಾದೊಡಮಾ ತರಂಗ ತತಿ ತಾಂ ಪ್ರತ್ಯೇಕಮಾಗುತ್ತೆ ನಾ।
ನ್ನದ ರೂಪಿಂ ಪರಿವಂತೆ ಧರ್ಮಮದು ತಾನಚ್ಛಿನ್ನ ಶಶ್ವತ್ಸ್ವರೂ ॥
ಪದೆ ಸಂದಿರ್ದೊಡಮಾವಗಂ ನವ ನವಾಕಾರಂಗಳಂ ಕಾಲ ಚ।
ಕ್ರದ ಸಂಭ್ರಾಂತಿಯಿನಾಸುತಿರ್ಕುಮೆನುತುಂ ಸರ್ವಜ್ಞ ನೀಂ ಸಾರಿದೈ

೧೩

ಖಿಲಮಾಗಿರ್ಪುದು ಧರ್ಮಮಿಂದು ಸದಸದ್ವಿಜ್ಞಾನಮಿಲ್ಲಂ ಧರಾ।
ವಲಯಂ ಶಾಂತಿವಿಹೀನಮಾಗಿಹುದು ವೇಲಾತೀತ ವಾರಾಶಿವೋಲ್ ॥

ಕಲಿ ಮರ್ಬಂ ಕವಿಸಿರ್ಪನಿಂದು ಶಮ ಸಂಯಾಮಾಸ್ತಿಕತ್ವಂಗಳು।
ಜ್ವಲಿಪಂತಾರು ವಿವೇಕ ದೀಪವನಮರ್ಚಲ್ ಬಲ್ಲರೈ ನಿನ್ನವೋಲ್ ॥

೧೪

ಗತಿ ನೀನೊರ್ವನೆ ದೀನಮಾನದ ವಿಭೋ ಸನ್ಮಾನ ಸೌಭಾಗ್ಯ ಸಂ।
ತತಿಯಂ ನೀಡೆಲೆ ಚಕ್ರವರ್ತಿ ಸಚಿವಾ ಮತ್ತಂ ನಿರಾಬಾಧ ಶಾ॥
ಶ್ವತ ಕಲ್ಯಾಣದ ಮಾರ್ಗದೊಳ್ ಪುಗಿಸು ಪುಣ್ಯಾಕಾರ ನಿಸ್ಸಂಘಿ್ರಯು।
ದ್ಯುತಿಯಿಂದೆಮ್ಮಯ ಜೀವಿತಂಗಳನಿಳಾಸಂಪೂಜ್ಯ ಸಂಪ್ರೀರಿಸೈ ॥

೧೫

ಬಲಮಂ ತೀವಿಸು ಮಾಂದ್ಯಮಂ ಬಿಡಿಸು ದುರ್ದೈನ್ಯಂಗಳಂ ನೀಗಿಸೊ।
ಳ್ಕಲೆಯಂ ಪೋಷಿಸು ಜಾಣ್ಮೆಯಂ ಪುಗಿಸು ಕಾರ್ಯೋತ್ಸಾಹ
ಧೈರ್ಯಂಗಳಂ ॥
ಕಲಿಸೀ ಭಾರತ ವಂಶ ಸಂಭವರ ಸದ್ಧರ್ಮಂಗಳಂ ಕೀರ್ತಿಯಂ।
ನಿಲಿಸೀ ದುಸ್ಸಹ ಕಾಲದೊಳ್ ಜಗದಿ ವಿದ್ಯಾರಣ್ಯ ಪುಣ್ಯಾಶ್ರಯಾ ॥

೧೬

ಉದ್ವೃತ್ತ್ವದ್ಯೋತಲೀಲಾಕ್ರಮದೆ ತಿಮಿರಮಂ ನೀಗಿ ಕರ್ಣಾಟದೊಳ್ ಸ।
ದ್ವಿದ್ಯಾಸಂದಂಗಳಂ ಸೂಸಿದ ವಿಬುಧವರಂ ಬ್ರಹ್ಮ ಧರ್ಮಾವತಾರಂ ॥
ಹೃದ್ಯೋದಂತಂ ಮಹಾಂತಂ ಪ್ರಥಿತ ಕೃತಿಶತಂ ಲೋಕಮಾನ್ಯಂ
ವದಾನ್ಯಂ।
ವಿದ್ಯಾರಣ್ಯಂ ವರೇಣ್ಯಂ ನೆಲಸುಗೆ ಮನದೊಳ್ ಮೌನಿ ವೃಂದಾಗ್ರ
ಗಣ್ಯಂ ॥

—ಜಯ ವಿದ್ಯಾರಣ್ಯ—

## ಡಿ. ವಿ. ಗುಂಡಪ್ಪನವರ ಇತರ ಗ್ರಂಥಗಳು

# ದಿವಾನ್ ಸಿ. ರಂಗಾಚಾರ್ಲು

**ಹೊಸ ಮುದ್ರಣ! ಹೊಸ ಭಾವಚಿತ್ರ!!. ಹೊಸ ಉಪಕಥೆಗಳು!!!**

ಇದು ಮೈಸೂರು ಸಂಸ್ಥಾನದ ಮೊದಲನೆಯ ಮುಖ್ಯ ಮಂತ್ರಿಯಾಗಿ, ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿ, ಭಾರತೀಯ ರಾಜ್ಯತಂತ್ರ ಕುಶಲರಲ್ಲಿ ಉತ್ತಮರೆಂದು ಪ್ರಸಿದ್ಧರಾದ ಮಹನೀಯರ ಜೀವನ ಚರಿತ್ರೆ; ಅವರ ಕಾರ್ಯ ಕಲಾಪವನ್ನೂ, ಅವರ ಉಪನ್ಯಾಸಗಳ ಸಾರವನ್ನೂ ವಿವರವಾಗಿ ತಿಳಿಸುತ್ತದೆ. ಈ ಕಾಲಕ್ಕೆ ಉಪಯುಕ್ತವಾದ ಅನೇಕ ರಾಜಕೀಯ ಬೋಧನೆಗಳು ಇದರಲ್ಲಿ ಅಡಗಿವೆ. ಮೈಸೂರಿನ ಪ್ರಸಿದ್ಧ ದೇಶಭಕ್ತರಾದ ಮ|| ಎಂ. ವೆಂಕಟಕೃಷ್ಣಯ್ಯನವರು ಪೀಠಿಕೆಯನ್ನು ಬರೆದಿದ್ದಾರೆ.

ಉತ್ತಮ ತೆರದ ಫೆದರ್ ವೆಯಿಟ್ ಕಾಗದದ ಮೇಲೆ ಅಚ್ಚಾಗಿ ನಾಮಾಂಕಿತ ಸಹಿತವಾದ ಕ್ಯಾಲಿಕೋ ರಟ್ಟಿನಲ್ಲಿ ಸುಂದರವಾಗಿ ಬೈಂಡಾಗಿ ಮೇಲುಗವಸಿನಿಂದ ಕೂಡಿದೆ. ಪುಸ್ತಕ ಭಂಡಾರದಲ್ಲಿಡಲು ಎಲ್ಲ ವಿಧದಲ್ಲಿಯೂ ಅರ್ಹವಾಗಿದೆ. **ಬೆಲೆ: ರೂ. ೨-೦-೦**

**ದಿವಾನ್ ಬಹದ್ದೂರ್ ರಾಜಸಭಾಭೂಷಣ ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿ, ಕೆಟಿ., ಸಿ.ಐ.ಇ. ಅವರು ಹೀಗೆ ಬರೆದಿರುವರು :—**

The essential features of the private life and public career of the famous administrator have been brought out and treated in a popular style. The book ought to be a source of inspiration to our budding statesmen as well as to the younger generation.

**ಮೈಸೂರು ವಿಶ್ವವಿದ್ಯಾಲಯದ ರಿಜಸ್ಟ್ರಾರವರಾದ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಹೀಗೆ ಬರೆದಿರುವರು :—**

I am specially pleased with the happy mean you have achieved in the style : dignified, yet popular . . . . . . . . From the beginning to the end, the reader is brought under the inspiration of Rangacharlu's one great work for our country. Indeed, the book is a beautiful little manual of patriotism and civic duty.

ಒಕ್ಕಲಿಗರ ಪತ್ರಿಕೆಯು ಹೀಗೆ ಬರೆದಿದೆ:—

**ಮ|| ಡಿ. ವಿ. ಜಿ. ಯವರು ಜೀವನಚರಿತ್ರೆಗಳನ್ನು ಸ್ವಾರಸ್ಯಕರವಾಗಿಯೂ ಮುಖ್ಯ ಸಂಗತಿಗಳೊಂದನ್ನೂ ಬಿಡದೆ ಸಂಕ್ಷೇಪವಾಗಿಯೂ ಬರೆಯುವುದರಲ್ಲಿ ಸಮರ್ಥರೆಂಬುದನ್ನು ಈ ಪುಸ್ತಕದಲ್ಲಿ ತೋರ್ಪಡಿಸಿಕೊಂಡಿರುವರು.**

# ಗೋಪಾಲ ಕೃಷ್ಣ ಗೋಖಲೆ

ಪ್ರಸಿದ್ಧ ದೇಶಭಕ್ತರೂ ರಾಜಕೀಯ ರಹಸ್ಯಜ್ಞರೂ ಆಗಿದ್ದ ಮಹನೀಯರ ಜೀವನ ಕಥೆಯನ್ನೂ ಅವರ ಮುಖ್ಯೋಪನ್ಯಾಸಗಳನ್ನೂ ಒಳಗೊಂಡು, ಪ್ರಕೃತ ನಮ್ಮ ಸ್ವರಾಜ್ಯ ಸಮಾರಂಭಕ್ಕೆ ಅವಶ್ಯವಾದ ಅನೇಕ ಸಂಗತಿಗಳನ್ನು ತಿಳುಹಿಸುವುದಾಗಿದೆ. ಲೋಕಮಾನ್ಯ ತಿಲಕರು, ಮಹಾತ್ಮಾ ಗಾಂಧಿಯವರು—ಮುಂತಾದವರು ಗೋಖಲೆಯವರನ್ನು ಕುರಿತು ಮಾಡಿರುವ ಗುಣಕಥನಗಳೂ, ಗೋಖಲೆಯವರು ಸ್ಥಾಪಿಸಿದ ದೇಶಸೇವಾ ಸಂಘದ ಪ್ರತಿಜ್ಞೆಗಳ ಭಾವವನ್ನೊಳಗೊಂಡ ಪದ್ಯಗಳೂ ಈ ಗ್ರಂಥದಲ್ಲಿ ಅಡಗಿವೆ. ಇದು ಅನೇಕ ಚಿತ್ರಗಳನ್ನೊಳಗೊಂಡಿದೆ.

**ಬೆಲೆ: ರೂ. ೧-೮-೦**

ಸಹಕಾರಿಯು ಹೀಗೆ ಬರೆದಿದೆ:—

ಗೋಖಲೆಯವರ ವಿಷಯವಾಗಿ ಇದುವರೆಗೂ ತಿಳಿದುಬಂದಿರುವ ವಿಷಯಗಳನ್ನೆಲ್ಲ ಒಳಗೊಂಡು, ಅತಿ ಸಂಕ್ಷೇಪವಾಗಿಯಾಗಲಿ ಅತಿ ದೀರ್ಘವಾಗಿಯಾಗಲಿ ಇರದೆ, ಮೃದು ಮಧುರವಾಗಿಯೂ ಹೃದಯಂಗಮವಾಗಿಯೂ ಇರುವ ಶೈಲಿಯಲ್ಲಿ ಬರೆಯಲ್ಪಟ್ಟ ಈ ಗ್ರಂಥವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟುದಕ್ಕಾಗಿ ನಾವೆಲ್ಲ ಮ|| ರಾ|| ಗುಂಡಪ್ಪನವರಿಗೆ ಕೃತಜ್ಞರಾಗಿರಬೇಕು.

ಜಯಕರ್ನಾಟಕವು ಹೀಗೆ ಬರೆದಿದೆ:—

......ಗೋಖಲೆಯವರ ಚರಿತ್ರೆಯನ್ನೂ, ಅವರ ಭಾಷಣಗಳ ತಥ್ಯಾಂಶವನ್ನೂ ಮತ್ತು ಅವರ ವಿಷಯವಾಗಿದ್ದ ದೊಡ್ಡ ದೊಡ್ಡ ಜನರ ಅಭಿಪ್ರಾಯಗಳನ್ನೂ ಕೊಟ್ಟು, ಸ್ವಲ್ಪದರಲ್ಲಿಯಾದರೂ ಗ್ರಂಥಕ್ಕೆ ಪೂರ್ಣತ್ವವನ್ನು ಕೊಡಲು ಪ್ರಯತ್ನಪಟ್ಟಿರುವರು. ನಾಮದಾರ ಗೋಖಲೆಯವರ ಚರಿತ್ರೆಯು ಸ್ವಯಂ ಸ್ಫೂರ್ತಿದಾಯಕವಾಗಿದ್ದರೂ ಬರಹಗಾರರ ಜಾಣತನದಿಂದ ಇಮ್ಮಡಿ ಮಹತ್ವವನ್ನು ಹೊಂದಿರುವುದು.

**ಕರ್ಣಾಟಕ ಪ್ರಕಟನಾಲಯ**
ಬಸವನಗುಡಿ ಪೋಸ್ಟ್, ಬೆಂಗಳೂರು ಸಿಟಿ
**Karnataka Publishing House**
**Basavangudi P.O., BANGALORE CITY**

**1961—28. ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ**